# ಬೆಂಗಳೂರಿನ ಬಿನ್ನಿಮಿಲ್ : ಒಂದು ಅಧ್ಯಯನ

(ಮಾಸ್ಟರ್ ಆಫ್ ಫಿಲಾಸಫಿ (ಎಂಫಿಲ್) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ)

ಸಂಶೋಧಕ

ಮದನ್. ಪಿ

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಮುಖ್ಯಸ್ಥರು / ಸಹ ಪ್ರಾಧ್ಯಾಪಕರು





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಬೆಂಗಳೂರಿನ ಬಿನ್ನಿಮಿಲ್ : ಒಂದು ಅಧ್ಯಯನ

(ಮಾಸ್ಟರ್ ಆಫ್ ಫಿಲಾಸಫಿ (ಎಂಫಿಲ್) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ)

ಸಂಶೋಧಕ

ಮದನ್. ಪಿ

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಮುಖ್ಯಸ್ಥರು / ಸಹ ಪ್ರಾಧ್ಯಾಪಕರು



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦



# ಮಾರ್ಗದರ್ಶಕರ ದೃಢೀಕರಣ ಪತ್ರ

ಬೆಂಗಳೂರಿನ ಬಿನ್ನಿಮಿಲ್ : ಒಂದು ಅಧ್ಯಯನ ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂಫಿಲ್ ಪದವಿಗಾಗಿ ಮದನ್. ಪಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

14/09/10

ಡಾ. ಎನ್. ಚಿನ್ನಸ್ವಾಮಿ ಸೋಸಲೆ
ಸಹ ಪ್ರಾಧ್ಯಾಪಕರು ಹಾಗೂ
ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಡಾ.ಎನ್.ಚಿನ್ನಸ್ವಾಮಿ ಸೋಸಲೆ
ಅಸೋಸಿಯೇಟ್ ಪ್ರೊಫೆಸರ್
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 4/09/10

## ಸಂಶೋಧಕರ ಪ್ರಮಾಣ ಪತ್ರ

ಬೆಂಗಳೂರಿನ ಬಿನ್ನಿಮಿಲ್ : ಒಂದು ಅಧ್ಯಯನ ಎಂಬ ಈ ಪ್ರಬಂಧವನ್ನು ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂಫಿಲ್ ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮದನ್. ಪಿ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 14/09/2010

# ಪರಿವಿಡಿ

ಅಧ್ಯಾಯ ೧

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ ಮತ್ತು ಆಕರಗಳು

೧.೪. ಇದುವರೆಗಿನ ಅಧ್ಯಯನಗಳ ಸಮೀಕ್ಷೆ.

೧೭೯೯ ರಿಂದ ೧೮೮೧ ರ ಅವಧಿಯಲ್ಲಿ ಕೃಷಿಯು ತನ್ನ ಸಾಂಪ್ರದಾಯಿಕ ಬೇಸಾಯ ಅಂದರೆ ವಾಣಿಜ್ಯ ದೃಷ್ಟಿಕೋನದ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಾ ಬಂದಿತು. ಇದಕ್ಕೆ ಒತ್ತಡ ಸನ್ನಿವೇಶಗಳು ಹಾಗೂ ಕಾರಣಗಳು ಏನೇ ಇದ್ದರೂ ಒಟ್ಟಿನಲ್ಲಿ ಬದಲಾವಣೆಯನ್ನು ಕಂಡುಕೊಂಡಿತು ಅಂತಲೇ ಹೇಳಬಹುದು.

ಮೈಸೂರು ಪ್ರಾಂತ್ಯದಲ್ಲಿ ಬೆಳೆಯುತ್ತಿದ್ದ ವಾಣಿಜ್ಯ ಬೆಳೆಗಳಲ್ಲಿಯೇ ಬಹಳ ಪ್ರಮುಖವಾದವುಗಳೆಂದರೆ ಕಾಫಿ, ತಂಬಾಕು, ಕಬ್ಬು, ಹತ್ತಿ, ರೇಷ್ಮೆ, ತೆಂಗು, ಏಲಕ್ಕಿ, ಅಡಿಕೆ ಮತ್ತು ವೀಳ್ಯದೆಲೆ ಇವುಗಳಲ್ಲಿ ವಿಶೇಷವೆಂದರೆ ಬೆಳೆಯನ್ನು ಬೆಳೆಯುವರಾಗಲಿ ಅಥವಾ ಅಲ್ಲಿನ ಸ್ಥಳೀಯರಾಗಲಿ ಇವುಗಳನ್ನು ಗಣನೀಯ ಪ್ರಮಾಣದಲ್ಲಿ ಅನುಭೋಗಿಸುತ್ತಿರಲಿಲ್ಲ.[೧] ಅವರು ಇದನ್ನು ಉತ್ಪಾದಿಸುತ್ತಿದ್ದುದು ಕೇವಲ ಬಾಹ್ಯ ಬೇಡಿಕೆಗಾಗಿ ಹೊರತು ಆಂತರಿಕ ಬೇಡಿಕೆಗಾಗಿ ಅಲ್ಲ. ಕೈಗಾರಿಕೆಗಳ ಬೆಳವಣಿಗೆಯೊಂದಿಗೆ ಅವುಗಳು ಅಂದರೆ ಹತ್ತಿ, ಕಾಫಿ ಮತ್ತು ರೇಷ್ಮೆ ಪ್ರಾಥಮಿಕ ಕಚ್ಚಾ ಸರಕುಗಳಾದವು. ರಾಜ್ಯದಲ್ಲಿ ಬಂಡವಾಳಶಾಹಿಗಳ ಬೆಳವಣಿಗೆಯಿಂದ ಕೃಷಿಯ ಉತ್ಪಾದನೆಯ ರಚನೆಯನ್ನು ನಿರ್ಧರಿಸಲು ಪ್ರಾರಂಭವಾಯಿತು.[೨] ಕ್ರಮೇಣವಾಗಿ ಕೈಗಾರಿಕೆಗಳ ಮತ್ತು ರಫ್ತು ಬೆಳೆಗಳ ಪ್ರಮಾಣ ಹೆಚ್ಚುತ್ತಾ ಹೋಯಿತು. ತೋಟಗಾರಿಕೆಯ ಬೆಳೆಗಳು ಮೀಸಲು ಪ್ರದೇಶಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿದವು. ಉದಾಹರಣೆಗೆ ಕಾಫಿಯು ಅಷ್ಟಗ್ರಾಮ ಮತ್ತು ನಗರ ಭಾಗಗಳಲ್ಲಿ ಬೆಳವಣಿಗೆಗೆ ಬಂದರೆ, ರೇಷ್ಮೆ ಬೆಂಗಳೂರು ಮತ್ತು ಮೈಸೂರುಗಳಲ್ಲಿ, ಅಡಿಕೆಯು ನಗರ ಹಾಗೂ ತುಮಕೂರಿನಲ್ಲಿ ವಿಶೇಷ ಬೆಳೆಗಳಾಗಿದ್ದವು. ಪ್ರತ್ಯೇಕ ಪ್ರದೇಶಗಳಲ್ಲಿ ಕೃಷಿಯಲ್ಲಿ ಆದ ಬೆಳವಣಿಗೆಯು, ಪ್ರಾರಂಭದಲ್ಲಿ ನೇರವಾಗಿ ಅನುಭೋಗಿಸುತ್ತಿದ್ದ ಬೆಳೆಗಳಿಗಿಂತ ಈಗಿನ ಆಹಾರ ಧಾನ್ಯಗಳು ಮಾರುಕಟ್ಟೆಯನ್ನು ಹೆಚ್ಚಿಸಿದವು.

ಬ್ರಿಟಿಷರು ಇಂಗ್ಲೆಂಡಿನ ಪ್ರತಿ ಔನ್ಸ್ (ಒಂದು ಔನ್ಸ್, ಪೌಂಡಿನ ೧/೧೬ನೆಯ ಭಾಗ ತೂಕ) ಹತ್ತಿಯನ್ನು ಆಮದು ಮಾಡಿಕೊಳ್ಳುವುದಕ್ಕೂ ಎಲ್ಲಿಲ್ಲದ ಗದ್ದಲವನ್ನು ಸೃಷ್ಟಿಸುತ್ತಿದ್ದರು.[೩] ಇದು ಅವರ ದುರಾಸೆಯ ಪರಮಾವಧಿಯಾಗಿದ್ದಿತು. ೧೮೩೮ರ ಘೋಷಣೆಯಲ್ಲಿ, ಮ್ಯಾಂಚೆಸ್ಟರ್ ವಾಣಿಜ್ಯ ಮಂಡಳಿಯು ರಸ್ತೆಯ ನಿರ್ಮಾಣಕ್ಕಾಗಿ ಹಾಗೂ ಭೂ ತೆರಿಗೆಯ ಪರಿಷ್ಕರಣೆಗಾಗಿ ಶಿಫಾರಸ್ಸನ್ನು ಮಾಡಿತು. ಇದರಿಂದ ಹತ್ತಿಯ ಪೂರೈಕೆಯಲ್ಲಿ ಏರಿಕೆಯನ್ನು ಕಂಡಿತು. ೧೮೪೬ರಲ್ಲಿ ಹತ್ತಿ ಆಯೋಗವು (Cotton Commission) ರೈಲ್ವೆ ಹಳಿಯ ನಿರ್ಮಾಣಕ್ಕಾಗಿ ದಕ್ಷಿಣ ಪ್ರದೇಶವನ್ನು ಸಿದ್ಧಪಡಿಸಿತು. ೧೮೫೩ರ ರೈಲ್ವೆ ವರದಿಯಲ್ಲಿಯೂ ಸಹ ಡಾಲ್‌ಹೌಸಿಯು ಹತ್ತಿ ಬೆಳೆಗಾಗಿ ಹಲವು ಬದಲಾವಣೆಗಳನ್ನು ತಂದನು.

ಮೈಸೂರು ತಾಲ್ಲೂಕಿನಲ್ಲಿ ಪ್ರಧಾನವಾಗಿ ಹತ್ತಿ ಬೆಳೆಯುವ ಪ್ರದೇಶವು ನಗರ ಭಾಗಗಳಲ್ಲಾಗಿತ್ತು(Nagar Division).[೪] ಆದರೆ ಈ ಭಾಗಗಳಲ್ಲಿ ಹತ್ತಿಯ ಮಾರಾಟ ಮಳಿಗೆಗಳಿರಲಿಲ್ಲ. ಹೆಚ್ಚಿನದಾಗಿ ಬೆಳೆದ ಹತ್ತಿಯನ್ನು ಕೊಯಮತ್ತೂರು ಜಿಲ್ಲೆಯ ಕೊಳ್ಳೆಗಾಲ ಪಟ್ಟಣಕ್ಕೆ ತೆಗೆದುಕೊಂಡು ಹೋಗಬೇಕಾಗಿತ್ತು. ಇದು ಮೈಸೂರು ಸಂಸ್ಥಾನದಲ್ಲಿಯೇ ಪ್ರಧಾನವಾದ ಮಾರಾಟ ಮಳಿಗೆಯಾಗಿತ್ತು. ಹೀಗಾಗಿ ತೂಕದಲ್ಲಿ ಮತ್ತು ಬೆಲೆಯಲ್ಲಿ ಏರು-ಪೇರು ಕಂಡುಬರುತ್ತಿತ್ತು.

೯.೮.೧೮೬೧ರಲ್ಲಿ ಗವರ್ನರ್ ಜನರಲ್ ಒಂದು ಠರಾವನ್ನು ಪಾಸು ಮಾಡಿತು. ಇದರ ಪ್ರಕಾರವಾಗಿ ಭಾರತ ಸರ್ಕಾರವು, ಎರಡು ವರ್ಷದ ಅವಧಿಯಲ್ಲಿ ಯಾರು ಉತ್ತಮ ಹತ್ತಿಯನ್ನು ಬೆಳೆಯುತ್ತಾರೋ ಅವರಿಗೆ ಬಹುಮಾನವನ್ನು ಘೋಷಿಸಿತು. ಈ ಬಹುಮಾನದ ಮೊತ್ತ ಬಾಂಬೆ ಮತ್ತು ಮದ್ರಾಸು ಪ್ರೆಸಿಡೆನ್ಸಿಯಲ್ಲಿ ತಲಾ ೧೦,೦೦೦ರೂ.ಗಳು ಆಗಿದ್ದಿತು. ಮೈಸೂರಿನಲ್ಲಿ ಈ ಬಹುಮಾನ ೫,೦೦೦ ರೂ.ಗಳಾಗಿದ್ದಿತು. ೧೮೬೧ರಲ್ಲಿ ಮೈಸೂರಿನಲ್ಲಿ ಹತ್ತಿ ಬೆಳೆಯ ಮೇಲ್ವಿಚಾರಕನನ್ನಾಗಿ ಡೇವಿಸ್‌ನನ್ನು ನೇಮಿಸಲಾಯಿತು.[೫] ಇವನು ವಿದೇಶಿ ಬಿತ್ತನೆ ಬೀಜಗಳನ್ನು ಪರಿಚಯಿಸಲು ಆಸಕ್ತಿ ತೋರಿದನು. ೪೬೫೭ ಮೌಂಡ್ಸ್ (ಮಣ) ತೂಕದ ಬೀಜಗಳನ್ನು ಇವನ ಮೇಲ್ವಿಚಾರಣೆಯಲ್ಲಿ ಹಂಚಲಾಯಿತು.

ಅಮೆರಿಕಾದಲ್ಲಿ ನಡೆದ ನಾಗರಿಕ ಯುದ್ಧದ ಪರಿಣಾಮವಾಗಿ ಹತ್ತಿ ವ್ಯಾಪಾರದಲ್ಲಿ ದುತ್ತನೆ ಏರಿಕೆಯನ್ನು ಕಂಡಿತು. ಅಂತೆಯೇ ಮೈಸೂರಿನಲ್ಲಿ ಹತ್ತಿಯ ಬೆಳೆಗೆ ಹೆಚ್ಚಿನ ಉತ್ತೇಜನವನ್ನು ನೀಡಲಾಯಿತು. ೧೮೬೬ರಲ್ಲಿ ಯುದ್ಧ ಕೊನೆಗೊಂಡ ನಂತರ ಹತ್ತಿಯ ಬೆಲೆಯು ಗಣನೀಯ ಪ್ರಮಾಣದಲ್ಲಿ ಕುಸಿಯಿತು. ಇದರ ಪೆಟ್ಟು ಮೈಸೂರಿನ ಅನೇಕ ಪ್ರದೇಶಗಳ ಮೇಲೆ ಬಿದ್ದಿತು.[೬] ಪರಿಣಾಮವಾಗಿ ಹತ್ತಿ ಬೆಳೆಯುವ ಪ್ರದೇಶಗಳನ್ನು ಕಡಿಮೆಗೊಳಿಸಲಾಯಿತು. ಇದನ್ನೇ ನಂಬಿಕೊಂಡಿದ್ದ ಹಲವು ಪ್ರದೇಶಗಳು ತೊಂದರೆಯನ್ನು ಅನುಭವಿಸಿದವು. ಪ್ರಾಕೃತಿಕವಾಗಿ ಯಾವ ಪ್ರದೇಶಗಳು

(ಕಪ್ಪು ಮಣ್ಣು ಇರುವ ಪ್ರದೇಶಗಳು) ಹತ್ತಿ ಬೆಳೆಗೆ ಯೋಗ್ಯವೋ ಆ ಪ್ರದೇಶಗಳಲ್ಲಿ ಮಾತ್ರ ಈ ಬೆಳೆಗೆ ಉತ್ತೇಜನ ನೀಡಲಾಯಿತು. ಇದರಿಂದಾಗಿ ಕೆಲವೇ ವರ್ಷಗಳಲ್ಲಿ ಇದರ ಉತ್ಪಾದನೆಯಲ್ಲಿ ಪ್ರಗತಿಯನ್ನು ಸಾಧಿಸಿತು. ಅಂತೆಯೇ ಭಾರತದ ಹತ್ತಿಗೆ ಜಪಾನ್‌ನಲ್ಲಿ ಹೊಸ ಮಾರುಕಟ್ಟೆ ಸೃಷ್ಟಿಯಾಯಿತು. ಇದು ಹೊಸ ಆಲೋಚನೆಗೆ ಎಡೆಮಾಡಿಕೊಟ್ಟಿತು. ಅಂದರೆ ದೇಶದೊಳಗಡೆ ಹತ್ತಿಯ (ಮಿಲ್) ಕಾರ್ಖಾನೆಗಳನ್ನು ಸ್ಥಾಪಿಸಿದರೆ ಒಳಿತು ಎಂದು ಭಾರತವು ಚಿಂತಿಸಿತು. ಇದರ ಪರಿಣಾಮವಾಗಿ ಭಾರತದಾದ್ಯಂತ ಹತ್ತಿಯ ಕಾರ್ಖಾನೆಗಳು ಸ್ಥಾಪನೆಯಾದವು. ಮೈಸೂರು ಸಂಸ್ಥಾನವೂ ಸಹ ಇದಕ್ಕೆ ಹೊರತಾಗಿರಲಿಲ್ಲ. ಬೆಂಗಳೂರಿನಲ್ಲಿ ಸ್ಥಾಪನೆಯಾದ ಉಣ್ಣೆ, ಹತ್ತಿ ಮತ್ತು ರೇಷ್ಮೆ ಮಿಲ್ ಅಥವಾ 'ಬಿನ್ನಿಮಿಲ್' ಮೈಸೂರು ಪ್ರಾಂತ್ಯದಲ್ಲಿ ಸ್ಥಾಪನೆಯಾದ ಆಧುನಿಕ ಮಿಲ್ಲು ಎಂತಲೇ ಹೇಳಬಹುದು.

## ೧.೧. ಅಧ್ಯಯನದ ಉದ್ದೇಶ

ಭಾರತ ಕೃಷಿಯಾಧಾರಿತ ರಾಷ್ಟ್ರ. ಕೃಷಿ ಉತ್ಪನ್ನಗಳಿಗೆ ಪೂರಕವಾದ ಕೈಗಾರಿಕೆಗಳು ಇಲ್ಲಿ ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಬಗ್ಗೆ ಇತಿಹಾಸದಲ್ಲಿ ದಾಖಲಿಸಲಾಗಿದೆ. ಈ ಕೈಗಾರಿಕೆಗಳಲ್ಲಿ ಬೃಹತ್ ಯಂತ್ರೋಪಕರಣಗಳ ಬಳಕೆಯಾಗುವವರೆಗೂ ಮಾನವ ನಿರ್ಮಿತ ಸಣ್ಣ ಯಂತ್ರಗಳಿಂದ ಬಟ್ಟೆ ಉತ್ಪಾದನೆ ಪ್ರಕ್ರಿಯೆ ನಡೆಯುತ್ತಿತ್ತು. ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದು ಅರ್ಹತೆ ಮತ್ತು ದಕ್ಷತೆಯ ಪ್ರತಿಪಾದಕರಾಗಿದ್ದ ಭಾರತ ರತ್ನ ಸರ್.ಎಂ. ವಿಶ್ವೇಶ್ವರಯ್ಯನವರು "ಕೈಗಾರೀಕರಣ ಇಲ್ಲವೆ ವಿನಾಶ" ಎಂದು ಅಭಿಪ್ರಾಯಿಸಿರುವುದು, ಒಂದು ದೇಶ ಆರ್ಥಿಕವಾಗಿ ಸದೃಢವಾಗಬೇಕಾದರೆ ಕೈಗಾರಿಕಾರಂಗ ಪ್ರಗತಿಯಾಗಬೇಕೆಂಬ ಮುನ್ಸೂಚನೆಯಾಗಿದೆ.[೬] ಈ ಕಾರಣದಿಂದ ಕೈಗಾರಿಕಾ ಕ್ರಾಂತಿಯಿಂದ ಭಾರಿ ಪ್ರಮಾಣದ ಯಂತ್ರಗಳನ್ನು ಬಳಸಿ ಜೀವನಾವಶ್ಯಕತೆಗೆ ಬೇಕಾದ ಬಟ್ಟೆಯನ್ನು ತಯಾರಿಸಲು ಆಸ್ಪದವಾಯಿತು. ಈ ಸಂದರ್ಭಗಳಲ್ಲಿ ಬೃಹತ್ ಯಂತ್ರಗಳನ್ನು ನಡೆಸಲು ಮಾನವ ಸಂಪನ್ಮೂಲವನ್ನು ಯಥೇಚ್ಛವಾಗಿ ಬಳಸಲಾಯಿತು.

ಬೆಂಗಳೂರಿನಲ್ಲಿ ಬಿನ್ನಿಮಿಲ್ ಕಾರ್ಖಾನೆಯ ಸ್ಥಾಪನೆಯು ೧೮೮೪ರಲ್ಲಿ ಆಯಿತು. ಕರ್ನಾಟಕದಲ್ಲಿ ಇದು ಪ್ರಥಮ ಹತ್ತಿ ಗಿರಣಿಯಾಗಿದೆ. ಇದು ಕೇವಲ ಹತ್ತಿ ಬಟ್ಟೆಗಳಿಗೆ ಸೀಮಿತವಾಗಿರದೆ ಉಣ್ಣೆ ಹಾಗೂ ರೇಷ್ಮೆ ಬಟ್ಟೆಗಳನ್ನು ಉತ್ಪಾದನೆ ಮಾಡುವ ಕಾರ್ಖಾನೆಯಾಗಿತ್ತು. ೧೯೦೦ರ ನಂತರ ಮೈಸೂರು ಹಾಗೂ ದಾವಣಗೆರೆಯಲ್ಲಿ ಅನೇಕ ಹತ್ತಿ ಗಿರಣಿಗಳು ಸ್ಥಾಪನೆಯಾದವು. ಇದರ ಪರಿಣಾಮವಾಗಿ ಬಿನ್ನಿಮಿಲ್ ಇವುಗಳೊಂದಿಗೆ ಸ್ಪರ್ಧೆಗಿಳಿಯಬೇಕಾಯಿತು. ೧೯೩೬ರ ನಂತರ ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಪ್ರಖ್ಯಾತವಾದ ದಾವಣಗೆರೆಯಲ್ಲಿ ಒಟ್ಟು ೦೮ ಹತ್ತಿಗಿರಣಿಗಳು ಖಾಸಗಿಯವರಿಂದ ಸ್ಥಾಪಿಸಲ್ಪಟ್ಟವು.[೭] ಅವುಗಳೆಂದರೆ;

೧. ದಾವಣಗೆರೆ ಹತ್ತಿಗಿರಣಿ (ಡಿ.ಸಿ.ಎಂ.) ೧೯೩೬

೨. ಶ್ರೀ ಶಂಕರ್ ಟೆಕ್ಸ್‌ಟೈಲ್ಸ್ ಮಿಲ್ಸ್ ಲಿಮಿಟೆಡ್, ೧೯೪೫

೩. ಶ್ರೀ ಗಣೇಶ ಹತ್ತಿಗಿರಿಣಿ, ೧೯೪೬

೪. ಶ್ರೀ ಯಲ್ಲಮ್ಮ ಕಾಟನ್, ಉಲನ್ ಆ್ಯಂಡ್ ಸಿಲ್ಕ್‌ಮಿಲ್ ಲಿಮಿಟೆಡ್, ೧೯೫೧

೫. ಚಂದ್ರೋದಯ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೫೭

೬. ಶ್ರೀ ಸಿದ್ಧೇಶ್ವರ ಟೆಕ್ಸ್‌ಟೈಲ್ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೫೭

೭. ಶ್ರೀ ಆಂಜನೇಯ ಕಾಟನ್ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೬೨

೮. ಚಿಗಟೇರಿ ಮಿಲ್ಸ್, ದಾವಣಗೆರೆ, ೧೯೬೩

ಈ ಮೇಲಿನ ಹತ್ತಿಗಿರಣಿಗಳಲ್ಲಿ ಸಾವಿರಾರು ಕಾರ್ಮಿಕರಿಗೆ ಉದ್ಯೋಗ ಸೃಷ್ಟಿಯಾಯಿತು.

ಇಂತಹ ಗಿರಣಿಗಳ ಪೈಪೋಟಿಯ ನಡುವೆಯೇ ಬಿನ್ನಿಮಿಲ್ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾಗಿತ್ತು. ಇದು ಎಂತಹ ಪೈಪೋಟಿಯನ್ನು ಎದುರಿಸಿತು ಎಂಬುದನ್ನು ಅಭ್ಯಸಿಸುವ ಜರೂರು ಈ ಅಧ್ಯಯನದ ಉದ್ದೇಶವಾಗಿದೆ.

ಬಿನ್ನಿಮಿಲ್ ಸ್ಥಾಪನೆಗೆ ಕಾರಣ ಮತ್ತು ಇದಕ್ಕೆ ಮಹನೀಯರ ಪಾತ್ರ, ಬೆಂಗಳೂರು ನಗರಾಭಿವೃದ್ಧಿಗೆ ಮಿಲ್ ಯಾವ ರೀತಿಯ ಕೊಡುಗೆಯನ್ನು ನೀಡಿತು ಎಂಬುದನ್ನು ತಿಳಿಯುವ ಉದ್ದೇಶ ಈ ಅಧ್ಯಯನದ್ದಾಗಿದೆ. ಕಾರ್ಮಿಕ ಸಂಘದ ಸ್ಥಾಪನೆ, ಕೂಲಿ ಕಾರ್ಮಿಕರ ಸ್ಥಿತಿಗತಿ ಹಾಗೂ ಅವರ ಹೋರಾಟಗಳು, ಕಾರ್ಮಿಕ-ಕಾರ್ಮಿಕರ ನಡುವಿನ ಭಿನ್ನಾ ಭಿಪ್ರಾಯಗಳೇನಾದರೂ ಇದ್ದವೆ, ಸ್ವಾತಂತ್ರ್ಯ ಚಳವಳಿಗೆ ಕಾರ್ಮಿಕ ಸಂಘದ ಕೊಡುಗೆ ಇತ್ಯಾದಿ ಅಂಶಗಳನ್ನು ಗ್ರಹಿಸುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಬಿನ್ನಿಮಿಲ್‌ನ ಅವನತಿ, ಇದಕ್ಕೆ ಕಾರಣಗಳು, ಕೃಷಿಯಿಂದಾದ ಬದಲಾವಣೆ, ಮಿಲ್‌ನ ಇಂದಿನ ಸ್ಥಿತಿಗತಿ ಇನ್ನಿತರ ಅಂಶಗಳನ್ನು ಬಯಲಿಗೆಳೆಯುವ ಉದ್ದೇಶವೂ ಸಹ ಈ ಅಧ್ಯಯನದ್ದಾಗಿದೆ.

**ಅಧ್ಯಯನದ ಮಹತ್ವ**

೧೮೮೪ರಲ್ಲಿ 'ಬೆಂಗಳೂರು ಉಣ್ಣೆ, ಹತ್ತಿ ಮತ್ತು ರೇಷ್ಮೆ ಮಿಲ್' ಎಂದು ಸ್ಥಾಪನೆಯಾಗಿ ೧೮೮೬ರಲ್ಲಿ ಬಿನ್ನಿಮಿಲ್‌ನೊಂದಿಗೆ ಐಕ್ಯವಾಗಿ ತನ್ನ ಕಾರ್ಯವನ್ನು ಮುಂದುವರೆಸಿದ ಈ ಕಾರ್ಖಾನೆಯು ೧೯೯೮ರವರೆಗೆ ತನ್ನ ಅಸ್ತಿತ್ವವನ್ನು ಸಾರಿ ಹೇಳಿದ್ದು, ೧೧೪ ವರ್ಷಗಳ ಚರಿತ್ರೆಯನ್ನು ಹೊಂದಿದೆ. ಇದು ಹಲವು ಕಾರ್ಮಿಕರಿಗೆ ಕೆಲಸವನ್ನು ನೀಡಿ ಅವರ ಜೀವನೋಪಾಯವನ್ನು ಸುಧಾರಿಸಿದ್ದಲ್ಲದೆ, ಬೆಂಗಳೂರು ನಗರಾಭಿವೃದ್ಧಿಗೂ ಸಹ ತನ್ನ ಕೊಡುಗೆಯನ್ನು

ನೀಡಿದೆ. ಹಾಗೆಯೇ ಕೃಷಿಯ ವಾಣಿಜ್ಯೀಕರಣಕ್ಕೂ ಸಹ ಈ ಮಿಲ್ ಕಾರಣವಾಗಿದೆ ಅಂತಲೇ ಹೇಳಬಹುದು.

ಬಿನ್ನಿಮಿಲ್‌ನ ಕಾರ್ಮಿಕರಿಂದ ಸ್ಥಾಪನೆಯಾದ ಕಾರ್ಮಿಕ ಸಂಘವು ಭಾರತದ ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯ ಚಳವಳಿ ಹಾಗೂ ಕರ್ನಾಟಕದ ಏಕೀಕರಣಕ್ಕೆ ತನ್ನನ್ನು ಸಕ್ರೀಯವಾಗಿ ತೊಡಗಿಸಿಕೊಂಡಿತ್ತು. ಇಷ್ಟೆಲ್ಲಾ ಕೌತುಕದ ಚರಿತ್ರೆಯನ್ನು ಹೊಂದಿರುವ ಬಿನ್ನಿಮಿಲ್‌ಅನ್ನು ಅಭ್ಯಸಿಸುವ ಪ್ರಸ್ತುತತೆ ಹಾಗೂ ಜರೂರು ಇಂದು ಅತ್ಯಗತ್ಯವಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಬೆಂಗಳೂರು ಬಿನ್ನಿಮಿಲ್‌ನ ಸ್ಥಿತಿಗತಿ, ಕಾರ್ಮಿಕರು ಹಾಗೂ ಸಂಘಕ್ಕೆ ಸಂಬಂಧಿಸಿದ್ದಾಗಿದೆ. ಈ ಅಧ್ಯಯನವು ಮೈಸೂರು ಸಂಸ್ಥಾನಕ್ಕೆ ಸಂಬಂಧಪಟ್ಟಂತೆ, ವಸಾಹತು ಹಾಗೂ ಸ್ವಾತಂತ್ರ್ಯ ನಂತರದ ಅವಧಿಯನ್ನು ಒಳಗೊಂಡಿದೆ. ಅಂದರೆ ೧೮೮೪ರಲ್ಲಿ ಪ್ರಾರಂಭವಾದ ಈ ಮಿಲ್ ೧೯೯೮ರಲ್ಲಿ ಅವಸಾನವನ್ನು ಕಂಡಿತು. ಈ ನಡುವೆ ಹಲವು ಕಾಲಘಟ್ಟಗಳನ್ನು ಹೊಂದಿದೆ.

'ಬೆಂಗಳೂರಿನ ಬಿನ್ನಿಮಿಲ್ : ಒಂದು ಅಧ್ಯಯನ' ಎಂಬ ಸಂಶೋಧನ ವಿಷಯಕ್ಕೆ ಆರು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ, ಅಧ್ಯಯನದ ಪ್ರಮುಖ ಉದ್ದೇಶ ಮತ್ತು ಮಹತ್ವ, ವಿಧಾನ ಮತ್ತು ವಿವಿಧ ಆಕರಗಳನ್ನು ಪರಿಚಯಿಸಲಾಗುವುದು. ಆ ಮೂಲಕ ಅಧ್ಯಯನದ ಗುರಿ, ಉದ್ದೇಶ ಕುರಿತಂತೆ ತಲಸ್ಪರ್ಶಿ ಅಥವಾ ಸಮಗ್ರವಾಗಿ ಅಧ್ಯಯನ ಮಾಡುವ ಸಮೀಕ್ಷೆ, ಅವಲೋಕನವನ್ನು ಖಚಿತಪಡಿಸಿಕೊಳ್ಳಲಾಗುವುದು. ಬಿನ್ನಿಮಿಲ್ ಕುರಿತಂತೆ ಇಲ್ಲಿಯವರೆಗೆ ಕೈಗೊಂಡಿರುವ ಅಧ್ಯಯನಗಳ ಸಮೀಕ್ಷೆಯನ್ನು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅವಲೋಕನ ಮಾಡಲಾಗಿದೆ.

ಎರಡನೆಯ ಅಧ್ಯಾಯವು, ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಬೆಂಗಳೂರಿನ ಭೌಗೋಳಿಕ ಲಕ್ಷಣಗಳು ಹಾಗೂ ಅದರ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಮೈಸೂರು ಅರಸರು ಮತ್ತು ಬಟ್ಟೆ ಕಾರ್ಖಾನೆಗಳ ಹಿನ್ನೆಲೆ, ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಸಂದರ್ಭವನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, ಬಿನ್ನಿಮಿಲ್ ಕಾರ್ಖಾನೆಯ ಅಸ್ಮಿತೆಯ ವಿಷಯಕ್ಕೆ ಸಂಬಂಧಿಸಿದಂತೆ ವಿವರಿಸಲಾಗಿದೆ. ಮಿಲ್ ಸ್ಥಾಪನೆಗೆ ಹಿನ್ನೆಲೆ ಕಾರಣ ಹಾಗೂ ಮಹನೀಯರ ಪಾತ್ರ, ಮಿಲ್ ಸ್ಥಾಪನೆಯಿಂದ ಉಂಟಾದ ಸಾಂಸ್ಕೃತಿಕ ಪ್ರಗತಿ, ಮಿಲ್‌ನ ಉಚ್ಛ್ರಾಯ ಕಾಲ, ದೇಶ-ವಿದೇಶ ಸಂಬಂಧ ಹಾಗೂ ಬೆಂಗಳೂರು ನಗರಾಭಿವೃದ್ಧಿಗೆ ಮಿಲ್‌ನ ಪಾತ್ರ ಎಂಬ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು, ಬಿನ್ನಿಮಿಲ್‌ನ ಕಾರ್ಮಿಕ ಸಂಘದ ಇತಿಹಾಸಕ್ಕೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗಿದೆ. ಸಂಘದ ಸ್ಥಾಪನೆಯ ಹಿನ್ನೆಲೆ, ಸ್ವಾತಂತ್ರ್ಯ ಚಳವಳಿಗೆ ಇವರ ಕೊಡುಗೆ, ಸ್ವತಂತ್ರ ನಂತರದ ಸಂಘಗಳು, ದಿನಗೂಲಿ ಮತ್ತು ಅಸಂಘಟಿತ ಕಾರ್ಮಿಕರ ಬಗೆಗೆ ಅಭ್ಯಾಸ ಮಾಡಲಾಗಿದೆ.

ಐದನೆಯ ಅಧ್ಯಾಯವು ಮಿಲ್‌ನ ಇಂದಿನ ಸ್ಥಿತಿಗತಿಗೆ ಸಂಬಂಧಿಸಿದ್ದಾಗಿದೆ. ಜಾಗತೀಕರಣದ ಪ್ರಭಾವ, ಆಧುನಿಕ ಯಂತ್ರೋಪಕರಣಗಳಿಂದಾದ ಬದಲಾವಣೆ, ವಿದೇಶಿ ವಿನಿಮಯ ಹಾಗೂ ಭಾರತದ ಆರ್ಥಿಕತೆ, ಕೃಷಿಯಿಂದಾದ ಬದಲಾವಣೆಯ ಅಂಶಗಳನ್ನು ಒಳಗೊಂಡಿದೆ.

ಆರನೆಯ ಅಧ್ಯಾಯವು ಸಮಾರೋಪ, ಇದರಲ್ಲಿ ಸಂಶೋಧನೆಯಲ್ಲಿ ಕಂಡುಕೊಂಡ ಫಲಿತಗಳು ಹಾಗೂ ಸಂಶೋಧನೆಯ ಅನಿಸಿಕೆಗಳನ್ನು ವಿಶ್ಲೇಷಣೆ ಮಾಡಲಾಗುವುದು.

### ೧.೩. ಅಧ್ಯಯನದ ವಿಧಾನ ಮತ್ತು ಆಕರಗಳು

ಪ್ರಸ್ತುತ ಅಧ್ಯಯನವು ಆರ್ಥಿಕ ಚರಿತ್ರೆ ಕ್ಷೇತ್ರಕ್ಕೆ ಸಂಬಂಧಿಸಿರುತ್ತದೆ. ಇಲ್ಲಿ ಬೆಂಗಳೂರು ನಗರದ ಬಿನ್ನಿಮಿಲ್ ಚರಿತ್ರೆ ಮತ್ತು ಅಲ್ಲಿನ ಕಾರ್ಮಿಕರ ಸ್ಥಿತಿಗತಿ ತಿಳಿಯುವ, ಚರ್ಚಿಸುವ, ವಿಶ್ಲೇಷಿಸುವ ಒಂದು ಸ್ಥೂಲ ಅಧ್ಯಯನದ ಉದ್ದೇಶವಾಗಿದೆ. ಈ ಅಧ್ಯಯನಕ್ಕೆ ಚರಿತ್ರೆಯ ವಿಧಿ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಉದಾಹರಣೆಗೆ ಮಾಹಿತಿಯ ಸಂಗ್ರಹ, ಬಾಹ್ಯ ವಿಮರ್ಶೆ, ಆಂತರಿಕ ವಿಮರ್ಶೆ, ವಿಶ್ಲೇಷಣೆಯ ಕಾರ್ಯ ಸೂತ್ರಗಳನ್ನು ಸಂಶೋಧನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಕೂಲಿ ಕಾರ್ಮಿಕರು, ದಾಖಲಾತಿಗಳ ಬಗ್ಗೆ ಅಲಕ್ಷ್ಯ ತೋರಿರುವುದು ಅವರ ಚಾರಿತ್ರಿಕ ಘಟನೆಗಳನ್ನು ಸಮಗ್ರವಾಗಿ ದಾಖಲಿಸುವಲ್ಲಿ, ಚರ್ಚಿಸುವಲ್ಲಿ ಅಲ್ಲಲ್ಲಿ ತೊಡಕಾಗಿದೆ. ಕಾರ್ಖಾನೆ, ಕಾರ್ಮಿಕರು ಹಾಗೂ ಅದಕ್ಕೆ ಸಂಬಂಧಿಸಿದ ಅಧ್ಯಯನವು ಆರ್ಥಿಕ ಚರಿತ್ರೆಯಾಗಿದ್ದು ಹಲವು ಸಮಾಜ ವಿಜ್ಞಾನಗಳಲ್ಲಿ ಸಂಬಂಧ ಹೊಂದಿದ್ದು ವಾಣಿಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಕಾನೂನು, ಚರಿತ್ರೆ, ಭೂಗೋಳ ಮುಂತಾದ ಶಿಸ್ತುಗಳ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನದ ಪರಿಧಿಯಲ್ಲಿ ಅಗತ್ಯವಿರುವ ಮಾಹಿತಿಗಳನ್ನು ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳಿಂದ ಪಡೆದುಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ವಿಷಯದ ವಿಶ್ಲೇಷಣೆ ಮಾಡುವಾಗ ಸೈದ್ಧಾಂತಿಕ ಹಿನ್ನೆಲೆಯನ್ನು ಬಳಸಿಕೊಳ್ಳಲಾಗಿದೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಅಂದರೆ, ೧೯೪೭ರಿಂದ ಇಂದಿನವರೆಗಿನ ಕಾಲಘಟ್ಟದಲ್ಲಿ ಪ್ರಜಾಪ್ರಭುತ್ವ, ಪ್ರಗತಿಪರ, ರಾಷ್ಟ್ರೀಯತೆ, ಎಡ, ಬಲಪಂಥೀಯ ಆಂದೋಲನಗಳು ಮತ್ತು ಹಿಂದುಳಿದ ವರ್ಗಗಳ ಹಾಗೂ ದಲಿತ ಚಳವಳಿಗಳ ಹಿನ್ನೆಲೆಯಲ್ಲಿ ಭಾರತೀಯ ಚರಿತ್ರೆಯ ಬರವಣಿಗೆಗೆ ಹೊಸ ಹೊಸ ಆಯಾಮಗಳನ್ನು ಕಂಡುಕೊಂಡಿತು. ಜಾತ್ಯಾತೀತ ಮತ್ತು ವೈಜ್ಞಾನಿಕ

ಮನೋಭಾವಕ್ಕೆ ಒತ್ತುಕೊಡುವ ಪ್ರಯತ್ನಗಳು ನಡೆದವು. ಜೊತೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಚರಿತ್ರೆಗೆ ಆದ್ಯತೆ ನೀಡುತ್ತಾ ರಾಜಕೀಯ ಚರಿತ್ರೆಯನ್ನು ನಗಣ್ಯ ಮಾಡಲಾಯಿತು. ಹೀಗೆ ಚರಿತ್ರೆಯ ರಚನೆಯಲ್ಲಿ ವಿಭಿನ್ನ ತಾತ್ವಿಕ ನೆಲೆಗಟ್ಟುಗಳನ್ನು ಕಂಡುಕೊಂಡಿರುವ ಹಿನ್ನೆಲೆಗಳನ್ನೆಲ್ಲಾ ಗಮನಿಸುತ್ತಾ ಪ್ರಸ್ತುತ ಅಧ್ಯಯನವನ್ನು ಪರಿಕಲ್ಪಿಸಿಕೊಳ್ಳಲಾಗಿದೆ. ಇಲ್ಲಿ ಬಿನ್ನಿಮಿಲ್‌ನ ಕಾರ್ಮಿಕರ ಸ್ಥಿತಿಗತಿ, ಹೋರಾಟ ಅಥವಾ ಬೆಳವಣಿಗೆಗಳ ಚಾರಿತ್ರಿಕ ಅಧ್ಯಯನವನ್ನು ಮಾಡಲಾಗಿದೆ.

**ಆಕರಗಳು**

ಈ ಅಧ್ಯಯನಕ್ಕೆ ಬೆಂಗಳೂರಿನ ರಾಜ್ಯ ಪತ್ರಾಗಾರ ಇಲಾಖೆಯ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ (ಐ.ಸಿ.ಹೆಚ್.ಆರ್)ನಲ್ಲಿನ ಮಾಹಿತಿಗಳು, ಮಿಥಿಕ್ ಸೊಸೈಟಿಯ ಗ್ರಂಥಾಲಯಗಳು ಹಾಗೂ ಬೆಂಗಳೂರಿನ ನಗರ ಕೇಂದ್ರೀಯ ಗ್ರಂಥಾಲಯಗಳಿಂದ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ. ಬಿನ್ನಿಮಿಲ್‌ನ ದಾಖಲೆ ಪತ್ರವನ್ನು, ಬೆಂಗಳೂರು ನಗರ ಪುರಸಭಾ ವರದಿಗಳನ್ನು, ಕಾನ್ಫಿಡೆನ್ಸಿಯಲ್ ಫೈಲ್‌ನ ವರದಿಗಳನ್ನು, ಜನರಲ್ ಮತ್ತು ಮಿಸಲೇನಿಯಸ್ ಫೈಲ್‌ಗಳ ಮಾಹಿತಿಗಳನ್ನು, ದಿವಾನರ ವರದಿಗಳನ್ನು, ಪೋಲಿಸ್ ದಾಖಲೆಗಳನ್ನು ಪ್ರಾಥಮಿಕ ಆಕರಗಳಾಗಿ ವಿಪುಲವಾಗಿ ಬಳಸಿಕೊಳ್ಳಲಾಗಿದೆ.

**೧.೪. ಇದುವರೆಗಿನ ಅಧ್ಯಯನಗಳ ಸಮೀಕ್ಷೆ**

ಗಿರಣಿಗಳು ಅಥವಾ ಕಾರ್ಖಾನೆಗಳು, ಕಾರ್ಮಿಕರು ಮತ್ತು ಅವರ ಚಳವಳಿಗಳು, ಸಂಘವನ್ನು ಕುರಿತಂತೆ ಅಂತರಾಷ್ಟ್ರೀಯ, ರಾಷ್ಟ್ರ, ರಾಜ್ಯ ಮಟ್ಟದಲ್ಲಿ ಸಂಶೋಧನೆ, ಅಧ್ಯಯನ, ಪರಿಚಯದ ನೆಲೆಯಲ್ಲಿ ಹಲವು ಕೃತಿಗಳು ಹೊರಬಂದಿವೆ. ರಾಜ್ಯಮಟ್ಟದ ಕಾರ್ಖಾನೆ ಹಾಗೂ ಕಾರ್ಮಿಕ ಚರಿತ್ರೆಯ ಅಧ್ಯಯನದಲ್ಲಿ ಬೆಂಗಳೂರು ನಗರದ ಬಿನ್ನಿಮಿಲ್‌ನ ಬಗೆಗೆ ಗೆಜೆಟಿಯರ್‌ಗಳಲ್ಲಿ ಅಥವಾ ಇನ್ನಿತರ ಕೆಲವು ಗ್ರಂಥಗಳಲ್ಲಿ ಕೆಲವೇ ಸಾಲುಗಳಲ್ಲಿ ವಿವರಿಸಿದ್ದು ವಿಪರ್ಯಾಸ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಅಗತ್ಯವಿರುವ ಹಲವು ಅಧ್ಯಯನಗಳ ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿದೆ. ಕಾರ್ಖಾನೆಗಳು ಹಾಗೂ ಕಾರ್ಮಿಕ ಹೋರಾಟಗಳು ಹಲವು ಸಮಾಜ ವಿಜ್ಞಾನಗಳಲ್ಲಿ ಸಂಬಂಧ ಹೊಂದಿರುವುದರಿಂದ ಅಂತರಶಿಸ್ತುಗಳಲ್ಲಿನ ಲಭ್ಯವಿರುವ ಕೃತಿಗಳನ್ನು ಇಲ್ಲಿ ಸಮೀಕ್ಷೆ ಮಾಡಲಾಗಿದೆ. ಕಾರ್ಖಾನೆಗಳು ಹಾಗೂ ಕಾರ್ಮಿಕರ ಚಳವಳಿ ಚರಿತ್ರೆ ಅರಿಯಲು ಪೂರಕವಾಗಿರುವ, ಕೈಗಾರಿಕೆಗಳನ್ನು ಮತ್ತು ಕಾರ್ಮಿಕರನ್ನು ಕುರಿತು ಚರ್ಚಿಸಲು ಲಭ್ಯವಿರುವ ಪ್ರಕಟಿತ ಕೃತಿಗಳು, ಪಿಎಚ್.ಡಿ. ಮಹಾಪ್ರಬಂಧಗಳು, ಎಂ.ಫಿಲ್ ನಿಬಂಧಗಳು, ಲೇಖನಗಳನ್ನು ಇಲ್ಲಿ ಸಮೀಕ್ಷೆ ಮಾಡುವ ಪ್ರಯತ್ನವಿದೆ.

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಪ್ರಮುಖವಾಗಿ ಡಾ. ಜಾನಕಿ ನಾಯರ್ ಎಂಬ ವಿದ್ವಾಂಸರು ತಮ್ಮ ಗ್ರಂಥವಾದ 'ಮೈನರ್ಸ್ ಆ್ಯಂಡ್ ಮಿಲ್ ಹ್ಯಾಂಡ್ಸ್'ನಲ್ಲಿ ಕೋಲಾರದ

ಚಿನ್ನದ ಗಣಿಯಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಮತ್ತು ಬೆಂಗಳೂರಿನ ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇವರ ದೃಷ್ಟಿ ಒಟ್ಟಾರೆ ಕಾರ್ಖಾನೆಗಳ ಬಗೆಗಿನದಾಗಿದೆ. ಇದನ್ನು ಹೊರತುಪಡಿಸಿ ಧರ್ಮಕುಮಾರ್ ಅವರ, ಸಂಪಾದಕೀಯದ 'ದ ಕೇಂಬ್ರಿಡ್ಜ್ ಎಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ,' ವಾಲ್ಯೂಮ್-೨, ೧೭೫೦-೧೯೭೦ (೧೯೮೨), ಭಾರತದ ಭೂಮಿ ಮತ್ತು ಜನರು, ರೈತಾಪಿವರ್ಗ, ನೀರಾವರಿ ಪದ್ಧತಿ, ಬೃಹತ್ ಕೈಗಾರಿಕೆಗಳು, ಹಣ ಮತ್ತು ಸಾಲ ವ್ಯವಸ್ಥೆ ಕುರಿತು ಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಿರುವ ಲೇಖನಗಳಿವೆ. ಆರ್.ಪಾಮೆದತ್ ಅವರ 'ಇಂಡಿಯಾ ಟು-ಡೇ' ಗ್ರಂಥದಲ್ಲಿ (೧೯೭೦), ಭಾರತದಲ್ಲಿ ಬ್ರಿಟಿಷರ ಆಳ್ವಿಕೆ, ಭಾರತದ ಮೇಲೆ ಮಾರ್ಕ್ಸ್ ತತ್ವಗಳ ಪ್ರಭಾವ, ಬ್ರಿಟಿಷರು ಭಾರತದ ಸಂಪತ್ತನ್ನು ದೋಚಿದ್ದು, ಕಾರ್ಮಿಕರ ಉದಯ ಮತ್ತು ಸಮಾಜವಾದ, ಕಾರ್ಮಿಕ ಚಳವಳಿಯ ಏಳಿಗೆ ಮುಂತಾದ ಮಾಹಿತಿ ಈ ಅಧ್ಯಯನಕ್ಕೆ ಮಾದರಿಯಾಗಿದೆ.

ಬಿ. ಷೇಕ್ ಅಲಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಕರ್ನಾಟಕ ಚರಿತ್ರೆಯ ೭ ಸಂಪುಟಗಳಲ್ಲಿ (೧೯೯೭), ಎಸ್. ಚಂದ್ರಶೇಖರ್‌ರವರು ಸಂಪುಟ ಸಂಪಾದಕರಾಗಿರುವ (೦೭)ನೇ ಸಂಪುಟವು ಪ್ರಸ್ತುತ ಅಧ್ಯಯನಕ್ಕೆ ಸಹಾಯಕವಾಗಿದೆ. ಈ ಸಂಪುಟದ ೭ನೇ ಲೇಖನವು ನಗರ ಕಾರ್ಮಿಕ ವರ್ಗದ ಪಾತ್ರ (ಕರ್ನಾಟಕದ) ಕುರಿತ ವಿವರಣೆ ನೀಡುತ್ತದೆ. ತಂಬಂಡ ವಿಜಯ್ ಪೂಣಚ್ಚ ಅವರ ಸಂಪಾದಕತ್ವದಲ್ಲಿ ಬಂದ ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ೪ ಚರಿತ್ರೆ (೨೦೦೧). ಇದರಲ್ಲಿ ಕರ್ನಾಟಕದ ಭಿನ್ನ ಕ್ಷೇತ್ರಗಳಲ್ಲಿನ ಚಳವಳಿಗಳನ್ನು ಕುರಿತು ದೀರ್ಘವಾದ ಮಾಹಿತಿ ಇದೆ. ಚಳವಳಿಗಳ ಸಾಲಿನಲ್ಲಿ ಕಾರ್ಮಿಕ ಚಳವಳಿ ಕುರಿತ ೨ ಲೇಖನಗಳಿವೆ. ಇದರಲ್ಲಿ ಮೊದಲ ಲೇಖನವನ್ನು ಜಾನಕಿ ನಾಯರ್‌ರವರು ರಚಿಸಿದ್ದು, ಆರ್.ಎಲ್. ಅನಂತರಾಮಯ್ಯನವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ಸೂರ್ಯನಾಥ ಕಾಮತ್ ಮತ್ತು ಎಂ.ಹೆಚ್. ಕೃಷ್ಣಯ್ಯನವರ ಸಂಪಾದಕತ್ವದಲ್ಲಿ ಬಂದ 'ಬೆಂಗಳೂರು ದರ್ಶನ' (೧೯೭೫) ಗ್ರಂಥವು ಬೆಂಗಳೂರು ಬಿನ್ನಿಮಿಲ್ ಬಗ್ಗೆ ಮಾಹಿತಿ ನೀಡುತ್ತದೆ. ಸುಂದರರಾವ್ ಬ.ನ.ರವರ 'ಬೆಂಗಳೂರಿನ ಇತಿಹಾಸ' (೧೯೮೫) ಗ್ರಂಥವು, ಚಂದ್ರಮೌಳಿ ಕೆ. ಅವರ 'ಬೆಂಗಳೂರಿನ ನೋಟಗಳು' (೨೦೦೨) ಎಂಬ ಗ್ರಂಥವು ಬಿನ್ನಿಮಿಲ್ ಬಗೆಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡಲು ಸಹಕಾರಿಯಾಗಿದೆ.

ದಾವಣಗೆರೆಯ ಹತ್ತಿಗಿರಣಿಗಳ ಬಗ್ಗೆ ಬಿ.ಪಿ. ಕುಮಾರ್ ಎಂಬುವವರು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬ರಲ್ಲಿ ಪಿಎಚ್.ಡಿ. ಪ್ರಬಂಧವನ್ನು ಸಲ್ಲಿಸಿರುವರು. ಅಂತೆಯೇ ಗುಲಬರ್ಗಾ ಎಂ.ಎಸ್.ಕೆ. ಮಿಲ್ ಬಗ್ಗೆ ಮಹೇಶಕುಮಾರ

ಎಸ್. ಸಂಕನೂರ ಎಂಬುವವರು ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್. ನಿಬಂಧವನ್ನು ೨೦೦೬ರಲ್ಲಿ ಚರಿತ್ರೆ ವಿಭಾಗಕ್ಕೆ ಸಲ್ಲಿಸಿರುವರು. ಆದರೆ ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿ ೧೯ನೇ ಶತಮಾನದ ಕೊನೆಯ ಹಾಗೂ ೨೦ನೇ ಶತಮಾನದ ಆದಿಭಾಗದಲ್ಲಿ ಪ್ರಾರಂಭವಾದ ಮೈಸೂರಿನ ಕೆ.ಆರ್. (ಕೃಷ್ಣರಾಜ) ಮಿಲ್, ಬೆಂಗಳೂರಿನ ಬಿನ್ನಿಮಿಲ್, ಮೈಸೂರು ಮಿಲ್ ಮತ್ತು ಮಿನರ್ವ ಮಿಲ್‌ಗಳು ರಾಜ್ಯದ ಏಕೀಕರಣಕ್ಕೆ ಹಾಗೂ ರಾಷ್ಟ್ರದ ಸ್ವಾತಂತ್ರ್ಯ ಚಳವಳಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದರೂ ಸಹ ಇವುಗಳನ್ನು ದೃಷ್ಟಿಕೋನದಲ್ಲಿರಿಸಿಕೊಂಡು ಯಾವುದೇ ಎಂ.ಫಿಲ್. ಹಾಗೂ ಪಿಎಚ್.ಡಿ. ಪ್ರಬಂಧಗಳು ರಚನೆಯಾಗಿಲ್ಲ. ಹಾಗಾಗಿ ಇಂದು ಇದು ಚರಿತ್ರೆಯ ವಿದ್ಯಾರ್ಥಿಗಳಿಗೆ ಸವಾಲಿನ ವಿಷಯವಾಗಿದೆ.

ಹಾಗಂತ ಇಂದು ನಿಂತುಕೊಂಡು ಈ ಕಾರ್ಖಾನೆಗಳನ್ನು ಗಮನಿಸಿದ್ದೇ ಆದರೆ ಇವುಗಳೇನು ಅಂತಹ ದೊಡ್ಡ ಕೈಗಾರಿಕೆಗಳಾಗಿರಲಿಲ್ಲ ಎಂದು ಗೇಲಿ ಮಾಡಬಹುದು. ಆದರೆ ಅಂದಿನ ಸಂದರ್ಭಕ್ಕೆ ಅವುಗಳೇ ರಾಜ್ಯದ ಬೃಹತ್ ಕೈಗಾರಿಕೆಗಳಾಗಿದ್ದವು. ಅತೀ ಹೆಚ್ಚು ಬಂಡವಾಳ ತೊಡಗಿಸಿದ ಕಾರ್ಖಾನೆಗಳಾಗಿದ್ದವು ಹಾಗೂ ದಿನದ ೨೪ ಗಂಟೆಯೂ ಶಿಫ್ಟ್‌ಗಳ ಮೂಲಕ (ದಿನಕ್ಕೆ ೩ ಶಿಫ್ಟ್‌ಗಳು ಇರುತ್ತಿದ್ದವು) ಸಾವಿರಾರು ಕಾರ್ಮಿಕರಿಗೆ ಉದ್ಯೋಗವನ್ನು ಒದಗಿಸಿದ್ದವು. ಹೀಗಾಗಿ ಇಂದು ಇವುಗಳ ಚರಿತ್ರೆಯನ್ನು ಎತ್ತಿಹಿಡಿಯುವ ಜವಾಬ್ದಾರಿ ಸಂಶೋಧನಾ ವಿದ್ಯಾರ್ಥಿಗಳ ಮೇಲಿದೆ. ಬಿನ್ನಿಮಿಲ್ ಬಟ್ಟೆ ಕಾರ್ಖಾನೆಯೂ ಇದೇ ಪರಿಧಿಯೊಳಗೆ ಬರುವಂತಹ ಕಾರ್ಖಾನೆಯಾಗಿದೆ. ಈ ನಿಟ್ಟಿನಲ್ಲಿ ಅಧ್ಯಯನದ ಪ್ರಯತ್ನ ಸಾಗಿದೆ.

**ಅಡಿಟಿಪ್ಪಣಿಗಳು**

೧. ಸಿದ್ದಲಿಂಗಸ್ವಾಮಿ, ಅಗ್ರೇರಿಯನ್ ರಿಲೇಶನ್ಸ್ ಇನ್ ಮೈಸೂರು, ೧೮೮೧-೧೮೮೧, ೧೯೯೭, ಪು. ೬೧.

೨. ಅದೇ.

೩. ರವಿ ಬತ್ರಾ (ಕನ್ನಡಾನುವಾದ ಪಾಟೀಲ ಎಸ್.ಆರ್.), ಪ್ರಉತ ಅರ್ಥವ್ಯವಸ್ಥೆ ಮತ್ತು ಭಾರತದ ಉಜ್ವಲ ಭವಿಷ್ಯ, ಪು. ೧೬೭, ೧೯೯೨.

೪. ಸಿದ್ದಲಿಂಗಸ್ವಾಮಿ, ಅಗ್ರೇರಿಯನ್ ರಿಲೇಶನ್ಸ್ ಇನ್ ಮೈಸೂರು, ೧೮೮೧-೧೮೮೧, ೧೯೯೭, ಪು. ೬೩.

೫. ಅದೇ.

೬. ಅದೇ.

೭ ಕುಮಾರ್ ಬಿ.ಪಿ., ದಾವಣಗೆರೆ ಹತ್ತಿಗಿರಣಿ ಕಾರ್ಮಿಕ ಚಳವಳಿಗಳು, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಮಾರ್ಗದರ್ಶಕರು : ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಪು. ೨.

೮. ಈಶ್ವರಪ್ಪ ಎಂ.ಜಿ. (ಸಂ), ಶತಮಾನದ ದಾವಣಗೆರೆ, ೨೦೦೦, ಪು. ೪೨.

ಭಾರತದ ಮಹಾನಗರಗಳ ಪೈಕಿ ಕೆಲವು ನಗರಗಳಿಗೆ ವಿಶಿಷ್ಟ ಭೌಗೋಳಿಕ ಅಂಶಗಳಿವೆ. ಮುಂಬೈ, ಕೋಲ್ಕತ್ತ, ಚೆನ್ನೈ ನಗರಗಳು ಸಮುದ್ರ ತೀರದಲ್ಲಿರುವುದರಿಂದ ಅವುಗಳ ಹವಾಮಾನವೂ ಇತರ ನಗರಗಳಿಗಿಂತ ಭಿನ್ನ. ಸಮುದ್ರದ ಉಪ್ಪು ನೀರಿನ ಅಂಶದಿಂದಾಗಿ ಬೇಸಗೆಯಲ್ಲಿ ಮುಜುಗರ ತರುವಷ್ಟು ಆರ್ದ್ರತೆಯ ಹವೆ, ಅಲ್ಲದೆ ಈ ಮಹಾನಗರಗಳ ಬೆಳವಣಿಗೆಗೆ ಸಮುದ್ರವೇ ಮಿತಿ ಹಾಕಿದೆ. ಆದರೆ ಅವು ಪ್ರಮುಖ ಬಂದರುಗಳಾಗಿ ಅಭಿವರ್ಧಿಸುವ ಅವಕಾಶವನ್ನು ಒದಗಿಸಿದೆ. ಹೀಗಾಗಿ ಈ ನಗರಗಳಿಂದ ಆಮದು ರಫ್ತುಗಳ ಭರಾಟೆಯು ಅಷ್ಟೆ ಜೋರಾಗಿ ಸಾಗಿದೆ. ಬೆಂಗಳೂರು ಬಟಾಬಯಲಿನ ನಗರ. ನೈಸರ್ಗಿಕವಾದ ಯಾವ ಭೌಗೋಳಿಕ ಮೇಲ್ಮೈ ಲಕ್ಷಣಗಳೂ ನಗರದ ಬೆಳವಣಿಗೆಗೆ ಅಡ್ಡಿ ಬಂದಿಲ್ಲ. ದೊಡ್ಡ ದೊಡ್ಡ ಪರ್ವತಗಳಾಗಲೀ, ಗಿರಿಕಂದರಗಳಾಗಲೀ ಇಲ್ಲಿಲ್ಲ. ದಕ್ಷಿಣ ಭಾರತದಲ್ಲೇ ಬೆಂಗಳೂರು ನಗರಕ್ಕೆ ಆಕರ್ಷಣೆಯುಂಟು. ಇದು ಬಯಲು ನಗರವಷ್ಟೇ ಅಲ್ಲ, ಇದು ನೆಲೆಯಾಗಿರುವುದು ಪ್ರಸ್ಥಭೂಮಿಯಲ್ಲಿ.

ಇಂದಿನ ಕರ್ನಾಟಕದ ಬಹುಭಾಗವನ್ನು ಹಿಂದೆ ಮೈಸೂರು ಪ್ರಸ್ಥಭೂಮಿಯೆಂದೇ ಕರೆಯುತ್ತಿದ್ದರು.[೧] ಪಶ್ಚಿಮಘಟ್ಟ, ಅದಕ್ಕೆ ಹೊಂದಿಕೊಂಡಂತೆ ಪಶ್ಚಿಮ ಭಾಗದಲ್ಲಿ ಕಡಲತೀರ, ಇದನ್ನು ಹೊರತುಪಡಿಸಿದರೆ ಕರ್ನಾಟಕದ ಬಹುಭಾಗ ಎತ್ತರಿಸಿದ ನೆಲೆ ಪ್ರಸ್ಥಭೂಮಿ. ಉತ್ತರ ಭಾಗದಲ್ಲಿ ದಖನ್ ಪ್ರಸ್ಥಭೂಮಿ, ಹಾಗೆಯೇ ದಕ್ಷಿಣಕ್ಕೆ ಇರುವ ಭೂ ಭಾಗವನ್ನು ಕರ್ನಾಟಕದ ಪ್ರಸ್ಥಭೂಮಿಯೆಂದೇ ಕರೆಯುವುದು ವಾಡಿಕೆ. ಇವು ಕರ್ನಾಟಕದ ಪ್ರಮುಖ ಭೂ ಮೇಲ್ಮೈ ಲಕ್ಷಣಗಳ ಹಂಚಿಕೆ.

ಬೆಂಗಳೂರಿನ ನೆಲೆ ದಕ್ಷಿಣ ಕರ್ನಾಟಕದ ಪ್ರಸ್ಥಭೂಮಿಯ ಪೂರ್ವಭಾಗಕ್ಕೆ ಇದ್ದು ವಿನ್‌ಸ್ಟನ್ ಚರ್ಚಿಲ್ ೧೮೯೬–೯೮ರ ಅವಧಿಯಲ್ಲಿ ಮೂರು ಬಾರಿ ಬೆಂಗಳೂರಿಗೆ ಬಂದು

ನೆಲೆಸಿದ್ದರು. ಅವರ ಗ್ರಂಥವಾದ "ಮೈ ಅರ್ಲಿ ಲೈಫ್"ನಲ್ಲಿ ಬೆಂಗಳೂರಿನ ವಾತಾವರಣ ಅತ್ಯುತ್ತಮವಾದುದು, ಇದು ಸಮುದ್ರ ಮಟ್ಟಕ್ಕಿಂತ ೩೦೦೦ ಅಡಿಗಳಿಗಿಂತಲೂ ಹೆಚ್ಚು ಎತ್ತರದಲ್ಲಿದೆ ಎಂದು ತಿಳಿಸಿದ್ದಾರೆ.[೨] ಈ ಔನತ್ಯವೇ ಬೆಂಗಳೂರಿನ ಹವಾಗುಣದ ಮೇಲೆ ಗಣನೀಯ ಪರಿಣಾಮ ಬೀರಿದೆ.

ಬೆಂಗಳೂರು ಮಹಾನಗರದ ಭೂ ಮೇಲ್ಮೈನಲ್ಲಿ ಎರಡು ಲಕ್ಷಣಗಳು ಪ್ರಧಾನವಾಗಿ ಎದ್ದು ಕಾಣುತ್ತವೆ. ಪೂರ್ವ ಭಾಗ ಅಲ್ಪಸ್ವಲ್ಪ ಏರಿಳಿತಗಳಿಂದ ಕೂಡಿದ ಉನ್ನತ ಭಾಗ. ಇಲ್ಲಿ ಹೆಬ್ಬಂಡೆಗಳು, ಶಿಲಾಚಾಚುಗಳು ಹೆಚ್ಚು ಸಾಂದ್ರವಾಗಿ ಕಂಡುಬರುವುದಿಲ್ಲ. ನೆಲ ಅಗೆದರೆ ೩ ರಿಂದ ೨೦೦ ಮೀಟರ್‌ವರೆಗೆ ಶಿಥಿಲೀಕರಣವಾದ ಶಿಲೆಗಳೇ ಹೆಚ್ಚು. ಬೆಂಗಳೂರಿನ ಬಸವನಗುಡಿ ಬಡಾವಣೆಯ ದೊಡ್ಡ ಬಸವಣ್ಣ ಇರುವ ಹೆಬ್ಬಂಡೆಗಳ ಬಿರುಕಿನಲ್ಲಿ ಶುದ್ಧನೀರಿನ ಸಣ್ಣ ತೊರೆಯಾಗಿ ವೃಷಭಾವತಿ ನದಿ ಹುಟ್ಟುತ್ತದೆ ಎಂದು ಶಾಸನದಲ್ಲೂ ಉಲ್ಲೇಖ ಇದೆ.[೩] ಬೆಂಗಳೂರಿನ ನಗರೀಕರಣ ಮತ್ತು ಕೈಗಾರಿಕೀಕರಣದ ಭರಾಟೆಯಲ್ಲಿ ವೃಷಭಾವತಿ ಈಗ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡು ಸಂಪೂರ್ಣವಾಗಿ ಕಲುಷಿತವಾಗಿದೆ. ಇದನ್ನು ಹೊರತುಪಡಿಸಿ ನದಿಗಳಾಗಲೀ ತೊರೆಗಳಾಗಲೀ ಇಲ್ಲ.

ಎಲ್ಲರ ಕಣ್ಣು ಸೆಳೆಯುವ ಲಾಲ್‌ಬಾಗ್ ಬಳಿಯ ಪೆನಿನ್ ಸುಲಾರ್ ನೈಸ್ ವಿಶ್ವ ಪ್ರಸಿದ್ಧಿಯಾಗಿದೆ. ಬೆಂಗಳೂರಿನಲ್ಲಿ ೧೨.೩.೧೮೭೯ರಲ್ಲಿ ಆದ ಭೂಕಂಪನ ಕುರಿತು ಓಲ್ಡ್‌ಹ್ಯಾಂ ಎಂಬ ಭೂವಿಜ್ಞಾನಿ ದಾಖಲು ಮಾಡಿದ್ದಾನೆ. ಹಾಗೆಯೇ ೩೦.೩.೧೯೮೪ ಮತ್ತು ಜನವರಿ ೨೯, ೨೦೦೧ರ ಬೆಳಗ್ಗೆ ೮.೦೮ರ ಸಮಯದಲ್ಲಿ ಭೂಕಂಪನಗಳು ಸಂಭವಿಸಿದ್ದರೂ ಅದು ಕೇವಲ ಕುರ್ಚಿ, ಪೀಠೋಪಕರಣಗಳು ಅಲುಗಾಡಿದಕ್ಕಷ್ಟೇ ಸೀಮಿತವಾಗಿದ್ದು ಯಾವುದೇ ಸಾವು, ನೋವುಗಳು ಸಂಭವಿಸಿದ್ದರ ಬಗ್ಗೆ ದಾಖಲೆಗಳಿಲ್ಲ.

ಆಡಳಿತಾತ್ಮಕವಾಗಿ ಬೆಂಗಳೂರನ್ನು ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಎಂದು ವಿಂಗಡಿಸಿದ್ದರೂ (೧೯೮೬) ಮಹಾನಗರವೂ ಸೇರಿದಂತೆ ಇಡೀ ಜಿಲ್ಲೆ ೧೨° ೩೯' ಉತ್ತರದಿಂದ ೧೩° ೩೮' ಉತ್ತರ ಅಕ್ಷಾಂಶ, ೭೭° ೨೦' ಪೂರ್ವದಿಂದ ೭೭° ೫೦' ಪೂರ್ವ ರೇಖಾಂಶದವರೆಗೂ ಹಬ್ಬಿದೆ. ಭಾರತೀಯ ಸರ್ವೇ ಇಲಾಖೆ ರಚಿಸಿರುವ ಮೇಲ್ಮೈ ನಕ್ಷೆಯಲ್ಲಿ ಬೆಂಗಳೂರು ಮಹಾನಗರ ೫೭ ಜಿ– ಮತ್ತು ೫೭ ಎಚ್ – ಡಿಗ್ರಿ ನಕ್ಷೆಯಲ್ಲಿ (೧:೨, ೫೦,೦೦೦ ಅಳತೆ ಪಟ್ಟಿಯಲ್ಲಿ) ಹಂಚಿಕೆಯಾಗಿದೆ.

ಬೆಂಗಳೂರು ಮೆಟ್ರೋಪೋಲ್ ಎಂದರೆ ಸುಮಾರು ೧,೪೦೦ ಚ.ಕಿ.ಮೀ. ವಿಸ್ತೀರ್ಣ ಹೊಂದಿರುವ ಹೊಸ ಬಡಾವಣೆಗಳನ್ನು ಒಳಗೊಂಡಿರುವ ನಗರ. ಹಲವು ಗ್ರಾಮಾಂತರ

ಪ್ರದೇಶಗಳನ್ನು ಒಳಗೆ ಸೇರಿಸಿಕೊಳ್ಳುತ್ತಲೇ ಎಲ್ಲಾ ದಿಕ್ಕುಗಳಲ್ಲೂ ಬೆಳೆದಿರುವ ನಗರ. ೧೯೪೯ರಲ್ಲಿ ಬೆಂಗಳೂರು ಕಾರ್ಪೊರೇಶನ್ ರೂಪುಗೊಂಡು ಬೆಂಗಳೂರು ನಗರವನ್ನು ಸಿವಿಲ್ ಮತ್ತು ಮಿಲಿಟರಿ ಕೇಂದ್ರಗಳೊಡನೆ ಐಕ್ಯಗೊಳಿಸಿದಾಗ ನಗರದ ವಿಸ್ತೀರ್ಣ ೬೯ ಚ.ಕಿ.ಮೀ. ಇತ್ತು.[೪] ಆದರೆ ೭೦ರ ದಶಕದಲ್ಲಿ ಇದು ೪೦೦ ಚ.ಕಿ.ಮೀ.ಗಳಷ್ಟು ಹಿಗ್ಗಿತು. ಈಗ ಬೆಂಗಳೂರು ಮಹಾನಗರದ ಎಲ್ಲೆಯನ್ನು ಗುರುತಿಸುವುದು ಮಹಾನಗರ ಪಾಲಿಕೆ ಹಾಗೂ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಗಳಿಗೂ ಕಷ್ಟದ ಕೆಲಸ.

ಬೆಂಗಳೂರಿನ ಬಡಾವಣೆಗಳಲ್ಲಿ ಹಳೆಯ ಮಂದಿರಗಳನ್ನು ಕಾಣಬಹುದು. ಬನಶಂಕರಿ (೧೯೧೫), ಸುಬ್ರಮಣ್ಯ (೧೯೩೪), ಕನ್ನಿಕಾ ಪರಮೇಶ್ವರಿ (೧೯೪೪), ದಂಡು ಮಾರಿಯಮ್ಮ (ಶಿವಾಜಿ ನಗರ), ಪಟಾಳಮ್ಮ (ಸೌತ್ ಎಂಡ್ ಸರ್ಕಲ್), ಅಣ್ಣಮ್ಮ (ಸುಭೇದಾರ್ ಛತ್ರಮ್ ರಸ್ತೆ), ಮುನೇಶ್ವರ, ಮಹೇಶ್ವರಮ್ಮ, ಮುತ್ಯಾಲಮ್ಮ (ಭಾರತೀನಗರ, ಕಂಟೋನ್‌ಮೆಂಟ್), ಈಶ್ವರ (ಶೇಷಾದ್ರಿಪುರ), ಜಲಕಂಠೇಶ್ವರ (ಶಾಂತಿನಗರ ಮತ್ತು ಕಲಾಸಿಪಾಳ್ಯ) ಇತ್ಯಾದಿ. ನಾಲ್ವಡಿ ಕೃಷ್ಣರಾಜರ ಪಟ್ಟಾಭಿಷೇಕದ ದಿನ ಉದ್ಘಾಟಿತವಾದ ವೇಣುಗೋಪಾಲಸ್ವಾಮಿ ಕೃಷ್ಣದೇವಸ್ಥಾನಕ್ಕೆ (ಮಲ್ಲೇಶ್ವರಂ) ನೂರು ವರ್ಷ ಸಂದಿದೆ.[೫]

ಇಂದು ಬೆಂಗಳೂರು ಭಾರತದಲ್ಲಿಯೇ ಐದನೆಯ ಅತೀ ದೊಡ್ಡ ನಗರ ಹಾಗೂ ಏಷ್ಯಾದಲ್ಲಿಯೇ ವೇಗವಾಗಿ ಬೆಳವಣಿಗೆಯಾಗುತ್ತಿರುವ ನಗರ ಎಂಬ ಖ್ಯಾತಿ ಪಡೆದಿದೆ. ಅದೇ ರೀತಿ ಪ್ರಪಂಚದಲ್ಲಿಯೇ ಅತೀ ಶೀಘ್ರವಾಗಿ ವಿಸ್ತರಣೆಯಾಗುತ್ತಿರುವ ಹತ್ತನೆಯ ನಗರ ಎಂಬ ಹೆಗ್ಗಳಿಕೆಗೂ ಪಾತ್ರವಾಗಿದೆ.[೬]

## ಚಾರಿತ್ರಿಕ ಹಿನ್ನೆಲೆ

ಬೆಂಗಳೂರು ಎಂಬುದು ಬೆಂದಕಾಳೂರಿನಿಂದ ಆಯಿತು ಎಂಬ ಐತಿಹ್ಯವಿದೆ. ಹೊಯ್ಸಳರ ಕಾಲದ ಒಂದು ತಮಿಳು ಶಾಸನದಲ್ಲೇ ಬೆಂಗಳೂರನ್ನು ತಮಿಳಿನಲ್ಲಿ 'ವೆಂಗಳೂರು' ಎಂದು ಕರೆದಿದೆ (ಮಡಿವಾಳ ಸೋಮೇಶ್ವರ ದೇವರ ಶಾಸನ, ೧೨೪೭). ಅಂದರೆ ಆಗಲೂ ಅದು 'ಬೆಂದಕಾಳೂರು' ಆಗಿರಲಿಲ್ಲ. ಅಲ್ಲದೆ 'ಬೆಂಗಳೂರು' ಎಂಬ ಹೆಸರು ಅದಕ್ಕೂ ಹಿಂದಿನಿಂದ ಇತ್ತು. ಆಗ ಬೆಂಗಳೂರು ಪಟ್ಟಣ ಇರಲಿಲ್ಲ. ಬೆಂಗಳೂರು ಪಟ್ಟಣ ಮತ್ತು ಕೋಟೆಗಳ ರಚನೆ ೧೬ನೇ ಶತಮಾನದಲ್ಲಿ ಆಯಿತು. ಅದಕ್ಕೂ ಪೂರ್ವದಲ್ಲಿ ಕೆಂಪೇಗೌಡರು ಕಟ್ಟಿದ ಕೋಟೆಯ ಪರಿಸರದಲ್ಲಿ ಬೆಂಗಳೂರಿನ ಹೆಸರನ್ನು ಹೇಳುವ ಬೇರೆ ಶಾಸನವಿಲ್ಲ.

ಬೆಂಗಳೂರು ಎಂಬ ಹೆಸರಿನ ಮೂಲರೂಪ ನಮಗೆ ೯ನೇ ಶತಮಾನದ ಒಂದು ಕನ್ನಡ ಶಾಸನದಲ್ಲಿ ದೊರೆಯುತ್ತದೆ. ಈ ಶಾಸನ ಇಂದು ಮಹಾನಗರ ಪಾಲಿಕೆಯ ಪರಿಧಿಯ

ಹೊರಗಿರುವ ಪ್ರಾಚೀನ ಪಟ್ಟಣವಾಗಿದ್ದ ಬೇಗೂರಿನಲ್ಲಿ ದೊರೆತ ಗಂಗರ ಶಾಸನ, 'ನಾಗತ್ತರನ ಮನೆಮಗಂ ಬುಟ್ಟಣಶೆಟ್ಟಿ ಬೆಂಗಳೂರ ಕಾಳಗದೊಳ್ ಸತ್ತಂ'[೬] ಎನ್ನುವ ಇದು ಬುಟ್ಟಣಶೆಟ್ಟಿ ಎಂಬ ಯೋಧನ ವೀರಮರಣದ ಸ್ಮಾರಕ ಶಿಲೆಯಾಗಿದೆ. ನಾಗತ್ತರನು ಗಂಗ ಅರಸರ ಒಬ್ಬ ಅಧಿಕಾರಿಯಾಗಿದ್ದು 'ಬೆಂಪೂರು-೧೨' ಎಂಬ ಪ್ರದೇಶದ ಮಾಂಡಳಿಕನಾಗಿದ್ದ. ಬೇಗೂರು (ಬೆಂಪೂರು) ನಾಗೇಶ್ವರ ದೇವಾಲಯ ಅವನದೇ ರಚನೆ.

ಇನ್ನೂ ಇತಿಹಾಸ ಪೂರ್ವಕಾಲಕ್ಕೆ ಬಂದರೆ ಒಟ್ಟಾರೆ ಈಗಿನ ರೇಸ್‌ಕೋರ್ಸ್ ಇರುವ ಪ್ರದೇಶದಲ್ಲಿ 'ಕಿನ್‌ಕೇಡ್ ಲೀ' ಎಂಬುವವರು ೧೮೯೬ರಲ್ಲಿ ನವಶಿಲಾಯುಗಕ್ಕೆ ಸಂಬಂಧಿಸಿದಂತೆ ಕೆಲವು ಕಿರುಶಿಲಾಯುಧ (ಮೈಕ್ರೋಲಿತ್ಸ್)ಗಳನ್ನು ಪತ್ತೆ ಹಚ್ಚಿದರು. ಇಂಥದೇ ಕಿರುಶಿಲಾಯುಧಗಳನ್ನು ಎಚ್.ಎ.ಎಲ್.ಗೆ ಹೋಗುವ ರಸ್ತೆಯ ಉತ್ತರದ ಒಂದು ನೆಲೆಯಲ್ಲಿ ೧೯೪೫ರಲ್ಲಿ 'ಗೋರ್ಡನ್' ಎಂಬುವವರು ಪತ್ತೆ ಮಾಡಿದರು. ಲಂಡನ್ ಮ್ಯೂಸಿಯಮ್‌ನಲ್ಲಿ ಕಾದಿಟ್ಟಿದ್ದ ಇವನ್ನು ಅಭ್ಯಸಿಸಿ ಎಂ. ಶೇಷಾದ್ರಿಯವರು ಇವು ಸುಮಾರು ಕ್ರಿಪೂ. ೬೦೦೦ದಷ್ಟು ಹಳೆಯವೆಂದು ಹೇಳಿದ್ದರು. ಎಂದರೆ ಈಗ ನಗರವಿರುವ ಪ್ರದೇಶದಲ್ಲಿ ಆಗ ಮಾನವ ನೆಲೆಸಿದ್ದನೆಂದಾಯಿತು.

ಕ್ರಿ.ಶ. ೫ನೆಯ ಶತಮಾನದಿಂದ ಕೋಲಾರವನ್ನು ರಾಜಧಾನಿಯಾಗಿ ಆಳಲು ಆರಂಭಿಸಿದ ಗಂಗರಾಜರ 'ಗಂಗವಾಡಿ' ಪ್ರದೇಶಕ್ಕೆ ಬೆಂಗಳೂರು ಸೇರಿತ್ತು. ಗಂಗರ ಮೊದಲ ರಾಜಧಾನಿ ಕೋಲಾರ. ಮುಂದೆ ತಲಕಾಡು ಮತ್ತು ಅವರ ಖ್ಯಾತ ಕೇಂದ್ರ ನಂದಿಯು ಬೆಂಗಳೂರಿಗೆ ಹತ್ತಿರದಲ್ಲೇ ಇತ್ತು. ಗಂಗರ ಕೊನೆಗಾಲದಲ್ಲಿ ನೆಲಮಂಗಲ ತಾಲ್ಲೂಕಿನ ಮಣ್ಣೆಯು ಅವರ ರಾಜಧಾನಿಯಾಯಿತು.

೧೭೫೮ರಲ್ಲಿ ಮರಾಠ ಸೇನೆ ದಂಡೆತ್ತಿ ಬರಲು ಹೈದರ್ ಅವರನ್ನು ಸೋಲಿಸಿ ಬೆಂಗಳೂರನ್ನು ಗೆದ್ದುಕೊಂಡ. ಇದರಿಂದ ಸಂತುಷ್ಟನಾದ ಇಮ್ಮಡಿ (ಕಿರಿಯ) ಕೃಷ್ಣರಾಜ ಒಡೆಯನು ಹೈದರ್‌ಗೆ ಬೆಂಗಳೂರನ್ನು ಜಾಗೀರಾಗಿ ನೀಡಿ 'ನವಾಬ್ ಹೈದರ್ ಅಲಿ ಖಾನ್' ಎಂಬ ಬಿರಿದಿತ್ತು ಗೌರವಿಸಿದ.

ಟಿಪ್ಪುವಿನ ಕಾಲದಲ್ಲಿ ೧೭೯೧ರಲ್ಲಿ ಕಾರ್ನ್‌ವಾಲೀಸ್ ಮದ್ರಾಸಿನಿಂದ ಬೆಂಗಳೂರು ಮೇಲೆ ಸಾಗಿ ಅದನ್ನು ಗೆದ್ದು (ಮಾರ್ಚ್, ೧೭೯೧) ಲೂಟಿ ಮಾಡಿದ. 'ಸಿಲೆಕ್ಟ್ ವ್ಯೂವ್ಸ್ ಆಫ್ ಮೈಸೂರು' (೧೭೯೧) ಎಂಬ ಹೋಮ್ ಎಂಬಾತ ಬರೆದ ಕೃತಿಯಲ್ಲಿ ಬೆಂಗಳೂರು ಪೇಟೆ ೬೦೦೦ ಅಡಿ ಉದ್ದ ಹಾಗೂ ೭೫೦ ಅಡಿ ಅಗಲವಾಗಿತ್ತು ಎಂದು ಹೇಳಿದ್ದಾನೆ. ಟಿಪ್ಪು ರಾಕೆಟ್‌ಗಳನ್ನು ಉತ್ಪಾದಿಸಿ ಜಗತ್ತೇ ಅಚ್ಚರಿಪಡುವಂತೆ ಮಾಡಿದ್ದು ಬೆಂಗಳೂರಿನಲ್ಲಿಯೇ.

ಕ್ರಿ.ಶ. ೧೮೦೦, ಮೇ ೧೦ ರಂದು ಬೆಂಗಳೂರಿಗೆ ಬಂದ ಬುಕನಾನ್ ಮೇ ೧೨ರಂದು ಕೆಂಗೇರಿಯಿಂದ ಶ್ರೀರಂಗಪಟ್ಟಣದ ಕಡೆಗೆ ಸಾಗುತ್ತಾನೆ. ಮುಂದೆ ಜೂನ್ ೨೨ ರಿಂದ ಜುಲೈ

೨ರವರೆಗೆ ಬೆಂಗಳೂರಿನಲ್ಲಿ ಇರುತ್ತಾನೆ. ಬೆಂಗಳೂರಿನ ವ್ಯಾಪಾರ, ಇಲ್ಲಿನ ಕೈಗಾರಿಕೆ, ಆಗ ಇದ್ದ ಸಮೃದ್ಧ ಬಟ್ಟೆ ನೇಯ್ಗೆ, ನೇಯ್ಗೆಯಲ್ಲಿ ತೊಡಗಿರುವ ಜಾತಿಗಳು ಮುಂತಾದ ಸಂಗತಿಗಳನ್ನು ಆತ ವಿವರವಾಗಿ ಅವನ ಮೂರು ಸಂಪುಟಗಳ ಕೃತಿಯ ಮೊದಲ ಸಂಪುಟದಲ್ಲಿ ನೀಡುತ್ತಾನೆ.[೮] ಅವನ ಕೃತಿ 'ಎ ಜರ್ನಿ ಫ್ರಂ ಮಡ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಆ್ಯಂಡ್ ಮಲಬಾರ್'.

೧೮೦೬ರಿಂದಲೇ ಶ್ರೀರಂಗಪಟ್ಟಣದಿಂದ ಬ್ರಿಟಿಷ್ ಸೈನ್ಯವು ಸ್ಥಳಾಂತರ ಆಗಿ ಬೆಂಗಳೂರು ಕೋಟೆ ಪ್ರದೇಶದಲ್ಲಿ ನೆಲೆಸಿತು.[೯] ಮುಂದೆ ೧೮೦೮ರಲ್ಲಿ ಕಂಟೋನ್ಮೆಂಟ್‌ನಲ್ಲಿ ನೆಲೆಸಲು ಪ್ರಾರಂಭಿಸಿದರು.

ಕಮಿಷನರ್‌ಗಳ ಅಧಿಕಾರಾವಧಿಯಲ್ಲಿ (೧೮೩೧–೧೮೮೧) ಬೆಂಗಳೂರು ಅಭಿವೃದ್ಧಿಯತ್ತ ಸಾಗಿತು. ನಂತರ ೧೮೮೧ರಿಂದ ಪ್ರಾರಂಭವಾದ ದಿವಾನರ ಆಡಳಿತ ೧೯೪೮ರಲ್ಲಿ ಕೊನೆಗೊಂಡಿತು. ೬೮ ವರ್ಷಗಳ ಈ ಅವಧಿಯಲ್ಲಿ ಬೆಂಗಳೂರು ಬೆಳವಣಿಗೆಯನ್ನು ಕಂಡಿತು. ಅಂತೆಯೇ ಸ್ವಾತಂತ್ರ್ಯ ಚಳುವಳಿ ಹಾಗೂ ರಾಜ್ಯದ ಏಕೀಕರಣಕ್ಕೆ ಬೆಂಗಳೂರಿನ ಪಾತ್ರವೂ ಸಹ ಗಣ್ಯ

## ೨.೧. ಮೈಸೂರು ಅರಸರು ಬಟ್ಟೆ ಕಾರ್ಖಾನೆಗಳ ಹಿನ್ನೆಲೆ

ಪ್ರಪಂಚದಾದ್ಯಂತ ಇರುವ ವಿರೋಧಭಾಸಗಳ ನಡುವೆಯೂ ಹಾಗೂ ಖಂಡ ಖಂಡಗಳ ಮಧ್ಯೆ, ದೇಶ ದೇಶಗಳ ಮಧ್ಯೆ ನಡೆಯುತ್ತಿರುವ ಯುದ್ಧಗಳ ನಡುವೆಯೂ ಇಡೀ ಪ್ರಪಂಚ ಒಂದು ವಿಷಯದಲ್ಲಿ ಮಾತ್ರ ಏಕಾಭಿಪ್ರಾಯವನ್ನು ಹೊಂದಿದೆ. ಅದೇನೆಂದರೆ ಪ್ರಪಂಚದ ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿಗೆ ಕೈಗಾರಿಕಾ ಬೆಳವಣಿಗೆ ಅತೀ ಮುಖ್ಯವಾದುದೆಂದು. ದೇಶದ ಆರ್ಥಿಕ ವ್ಯವಸ್ಥೆ ಎರಡು ಪ್ರಮುಖ ಬೆಳವಣಿಗೆಗಳನ್ನು ಅವಲಂಬಿಸಿರುತ್ತದೆ. ಅವುಗಳೆಂದರೆ ಕೃಷಿಕ್ಷೇತ್ರ ಹಾಗೂ ಕೈಗಾರಿಕಾ ಕ್ಷೇತ್ರ, ಈ ಎರಡೂ ಕ್ಷೇತ್ರಗಳೂ ಪರಸ್ಪರ ಪೂರಕವಾಗಿ ಕೆಲಸ ಮಾಡಿದಾಗ ಮಾತ್ರ ಒಂದು ರಾಷ್ಟ್ರ ಬಲಿಷ್ಠ ರಾಷ್ಟ್ರವಾಗಬಲ್ಲದು.[೧೦] ಇದು ಪ್ರಾಚೀನ ಕಾಲದಿಂದ ಹಿಡಿದು ಸಮಕಾಲೀನವರೆಗೂ ಅನ್ವಯಿಸಿ ನೋಡಬಹುದಾದ ವಿಷಯವಾಗಿದೆ.

ಕ್ರಿ.ಪೂ. ೨೦೦೦ದಲ್ಲೇ ಬಟ್ಟೆಗಳಿಗೆ ಬಣ್ಣ ಹಾಕಿ ಒಣಗಿಸುವ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿಕೊಳ್ಳಲಾಗಿತ್ತು ಎಂದು ಮಹೆಂಜೊದಾರೋವಿನಲ್ಲಿ ದೊರೆತಿರುವ ಪ್ರಾಕ್ತಾನಾಧಾರಗಳು ದೃಢಪಡಿಸುತ್ತವೆ. ಆಂಧ್ರ ಮತ್ತು ತಮಿಳುನಾಡಿನ ಬಂದರುಗಳಿಂದ ದೊಡ್ಡ ಹಡಗುಗಳಲ್ಲಿ ಚೀನಾ ಮತ್ತು ದಕ್ಷಿಣ–ಪೂರ್ವ ಏಷ್ಯಾ ರಾಷ್ಟ್ರಗಳಿಗೆ ಭಾರತದ ಹತ್ತಿ ಬಟ್ಟೆಗಳು ರಫ್ತಾಗುತ್ತಿದ್ದವು ಎಂಬುದು ಮಾರ್ಕೊಪೊಲೊನ ಬರವಣಿಗೆಗಳಲ್ಲಿ ಕಂಡುಬರುತ್ತವೆ. ಬೌದ್ಧ ಸಾಹಿತ್ಯದಲ್ಲಿ ತಿಳಿಸಿರುವಂತೆ ಕ್ರಿ.ಪೂ. ೫೦೦ಕ್ಕೂ ಮೊದಲೇ ಭಾರತೀಯರಿಗೆ ಉಣ್ಣೆ ಸರಕುಗಳನ್ನು ಉತ್ಪಾದಿಸುವ

ಜ್ಞಾನವಿತ್ತೆಂಬ ಮಾಹಿತಿ ಇದೆ. ಡಾಕಾ ಮಸ್ಲಿನ್ ಬಟ್ಟೆಯು ಭಾರತದ ಎಲ್ಲಾ ಹತ್ತಿ ಉತ್ಪಾದನೆಗಳಿಗಿಂತಲೂ ಉತ್ತಮ ಗುಣಮಟ್ಟದಾಗಿತ್ತು. ಇಷ್ಟೆಲ್ಲಾ ಪ್ರಾಚೀನತೆಯುಳ್ಳ ಈ ಉದ್ಯಮವು ಆಂಧ್ರಪ್ರದೇಶದ ಮಚಲಿಪಟ್ಟಣ, ತಮಿಳುನಾಡಿನ ಆರ್ಕಾಟ್, ಗುಜರಾತಿನ ಅಹಮದಾಬಾದ್, ಮಹಾರಾಷ್ಟ್ರದ ಟ್ರಾಂಬೆ, ಉತ್ತರ ಪ್ರದೇಶದ ವಾರಣಾಸಿ ಮುಂತಾದ ಕಡೆ ತನ್ನ ನೆಲೆಯನ್ನು ಕಂಡುಕೊಂಡಿತ್ತು.

ಭಾರತದ ಆಧುನಿಕ ಹತ್ತಿಬಟ್ಟೆ ಉದ್ಯಮಕ್ಕೆ ಒಂದೂವರೆ ಶತಮಾನದ ಇತಿಹಾಸವಿದೆ. ದೇಶದ ಮೊಟ್ಟಮೊದಲ ಹತ್ತಿಗಿರಣಿ ೧೮೧೮ರಲ್ಲಿ ಕೋಲ್ಕತ್ತಾದಲ್ಲಿ ಸ್ಥಾಪಿಸಲ್ಪಟ್ಟಿತು.[೧೧] ಆದರೆ ಹತ್ತಿಬಟ್ಟೆ ಕೈಗಾರಿಕೆಯ ನೈಜ ಆರಂಭ ೧೮೫೪ರಲ್ಲಿ ಮುಂಬಯಿಯಲ್ಲಿ ಒಂದು ಹತ್ತಿಗಿರಣಿ ಸ್ಥಾಪಿಸುವುದರೊಂದಿಗೆ ಪ್ರಾರಂಭವಾಯಿತು.[೧೨] ಆ ತರುವಾಯ ಮುಂಬಯಿಯಲ್ಲಿ ಅನೇಕ ಹತ್ತಿಬಟ್ಟೆ ಗಿರಣಿಗಳು ಸ್ಥಾಪಿಸಲ್ಪಟ್ಟವು. ೧೯೦೫ರ ಸ್ವದೇಶಿ ಚಳವಳಿ ಹತ್ತಿಬಟ್ಟೆ ಉದ್ಯಮದ ಬೆಳವಣಿಗೆಗೆ ಪ್ರೇರಕವಾಯಿತು.[೧೩] ಈ ಎಲ್ಲಾ ಹಿನ್ನೆಲೆಗಳಿಂದ ಮುಂಬಯಿಯನ್ನು ಭಾರತದ ಮ್ಯಾಂಚೆಸ್ಟರ್ ಎಂದು ಕರೆಯಲಾಗುತ್ತಿದೆ. ಏಕೆಂದರೆ ದೇಶದ ಹೆಚ್ಚಿನ ಹತ್ತಿಬಟ್ಟೆ ಗಿರಣಿಗಳು ಇಲ್ಲಿ ಕೇಂದ್ರೀಕೃತಗೊಂಡಿವೆ.

ಅಂತೆಯೇ ಮೈಸೂರು ಸಂಸ್ಥಾನವು ಕಾರ್ಖಾನೆಗಳ ಕಡೆಗೆ ಮುಖಮಾಡಿ ನಿಂತಿತ್ತು. ಇದು ಪ್ರಾರಂಭದಲ್ಲಿ ಕೃಷಿಯಾಧಾರಿತ ಕೈಗಾರಿಕೆಗಳಿಗೆ ಹೆಚ್ಚಿನ ಒತ್ತನ್ನು ನೀಡಿತ್ತು. ಅವುಗಳೆಂದರೆ, ರೇಷ್ಮೆ ಕೈಗಾರಿಕೆ, ಹತ್ತಿಬಟ್ಟೆ ಕೈಗಾರಿಕೆ, ಎಣ್ಣೆ ಕೈಗಾರಿಕೆ, ಕಾಫಿ–ಟೀ ಕೈಗಾರಿಕೆ, ಸಕ್ಕರೆ ಕೈಗಾರಿಕೆ, ತಂಬಾಕು ಇತ್ಯಾದಿ. ಇವುಗಳಲ್ಲಿ ಬಟ್ಟೆ ಕಾರ್ಖಾನೆಗಳು ಬಹಳ ಪ್ರಮುಖವಾದುದು. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಬಟ್ಟೆ ಕಾರ್ಖಾನೆ ಎಂದರೆ ಅದು ಉಣ್ಣೆ, ಹತ್ತಿ ಹಾಗೂ ರೇಷ್ಮೆ ಮೂರಕ್ಕೂ ಸಂಬಂಧಿಸಿದ್ದಾಗಿದೆ. ಮೈಸೂರು ಸಂಸ್ಥಾನದಲ್ಲಿ ಮೈಸೂರು, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳು ಬಟ್ಟೆ ಕಾರ್ಖಾನೆಗಳಿಗೆ ಹೆಸರುವಾಸಿಯಾಗಿದ್ದವು. ಆ ಸಂದರ್ಭದಲ್ಲಿ ಇವುಗಳ ಸ್ಥಾಪನೆಯ ಹಿನ್ನೆಲೆಯಲ್ಲಿ ರಾಜರುಗಳ ಪ್ರೋತ್ಸಾಹ, ದಿವಾನರುಗಳ ಬೆಂಬಲ ಹೆಚ್ಚಿನದಾಗಿತ್ತು ಎಂತಲೇ ಹೇಳಬಹುದು. ಅದರಲ್ಲೂ ಚಿತ್ರದುರ್ಗ ಜಿಲ್ಲೆಯ ದಾವಣಗೆರೆಯು ಬಟ್ಟೆ ವ್ಯಾಪಾರದ ಹಿನ್ನೆಲೆಯಲ್ಲಿ 'ಕರ್ನಾಟಕದ ಮ್ಯಾಂಚೆಸ್ಟರ್' ಎಂಬ ಸ್ಥಾನ ಗಳಿಸಿತ್ತು.[೧೪]

ಮೈಸೂರು ಸಂಸ್ಥಾನದ ದಿವಾನರಾಗಿದ್ದ ಸರ್.ಎಂ. ವಿಶ್ವೇಶ್ವರಯ್ಯನವರು ಕೈಗಾರಿಕಾ ಬೆಳವಣಿಗೆಗೆ ಪ್ರೋತ್ಸಾಹ ನೀಡಿದರು. ಅರ್ಹತೆ ಹಾಗೂ ದಕ್ಷತೆಯ ಪ್ರತಿಪಾದಕರಾಗಿದ್ದ ಅವರಿಗೆ ಕೈಗಾರಿಕಾ ಅಭಿವೃದ್ಧಿ ವಲಯದಲ್ಲಿ ರಾಷ್ಟ್ರವು ನಿಧಾನ ನಡಿಗೆಯಲ್ಲಿ ಹೋಗುತ್ತಿರುವುದು ಅಸಮಾಧಾನ ಉಂಟು ಮಾಡಿತ್ತು. ಇವರು ಮತ್ತು ಮಿರ್ಜಾ ಇಸ್ಮಾಯಿಲ್ ಅವರ ಪ್ರೋತ್ಸಾಹದ

ಹಿನ್ನೆಲೆಯಲ್ಲಿ ಕೈಗಾರಿಕೆಗಳ ಬೆಳವಣಿಗೆಗೆ ಚಾಲನೆ ದೊರೆಯಿತು. ಬಂಡವಾಳಶಾಹಿಗಳು ಕೈಗಾರಿಕೆಗಳನ್ನು ಸ್ಥಾಪಿಸಲು ಆರಂಭಿಸಿದರು.

ಚಿತ್ರದುರ್ಗ ಜಿಲ್ಲೆಯಲ್ಲಿ ೯ ಹತ್ತಿ ಗಿರಣಿಗಳಿದ್ದು ಅವುಗಳಲ್ಲಿ ೮ ದಾವಣಗೆರೆಯಲ್ಲಿ, ೧ ಹರಿಹರದಲ್ಲೂ ಸ್ಥಾಪನೆಯಾಗಿತ್ತು.[೧೫] ೧೯೩೬ರಲ್ಲಿ ದಿ ದಾವಣಗೆರೆ ಕಾಟನ್ ಮಿಲ್ಸ್‌ಗೆ ಅಡಿಗಲ್ಲನ್ನು ಹಾಕಿಲಾಯಿತು, ಇದರ ರೂವಾರಿ ರಾಜನಹಳ್ಳಿ ಹನುಮಂತಪ್ಪ. ೧೯೦೩ರಲಿ ಚಿಗಟೇರಿ ಮಿಲ್ಸ್ ಸ್ಥಾಪನೆಯಾಯಿತು. ಈ ಎರಡೂ ಕಾರ್ಖಾನೆಗಳ ಸ್ಥಾಪನೆಯ ಅವಧಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರಿನ ಮಹಾರಾಜರು, ೧೯೦೩ರ ಅವಧಿಯಲ್ಲಿ ಪಿ.ಎನ್. ಕೃಷ್ಣಮೂರ್ತಿ ಹಾಗೂ ೧೯೩೬ರ ಸಂದರ್ಭದಲ್ಲಿ ಮಿರ್ಜಾ ಇಸ್ಮಾಯಿಲ್‌ರು ದಿವಾನರುಗಳಾಗಿದ್ದರು. ೧೯೪೫ರಲ್ಲಿ ಶ್ರೀ ಶಂಕರ ಟೆಕ್ಸ್‌ಟೈಲ್ಸ್ ಮಿಲ್ಸ್, ೧೯೪೬ರಲ್ಲಿ ಶ್ರೀ ಗಣೇಶ್ ಟೆಕ್ಸ್‌ಟೈಲ್ಸ್ ಮಿಲ್ಸ್ ಲಿಮಿಟೆಡ್ ಪ್ರಾರಂಭವಾಯಿತು. ಈ ಅವಧಿಯಲ್ಲಿ ಜಯಚಾಮರಾಜೇಂದ್ರ ಒಡೆಯರು ಮೈಸೂರು ಸಂಸ್ಥಾನದ ಮಹಾರಾಜರು ಹಾಗೂ ಎನ್. ಮಾಧವರಾವ್ ದಿವಾನರಾಗಿದ್ದರು. ಅಂತೆಯೇ ಸ್ವತಂತ್ರ ಬಂದ ನಂತರ ೧೯೫೧ರಲ್ಲಿ ಶ್ರೀ ಎಲ್ಲಮ್ಮ ಕಾಟನ್-ಉಲ್ಲನ್ ಆ್ಯಂಡ್ ಸಿಲ್ಕ್ ಮಿಲ್ಸ್ ಲಿಮಿಟೆಡ್, ೧೯೫೭ರಲ್ಲಿ ಶ್ರೀ ಚಂದ್ರೋದಯ ಮಿಲ್ಸ್ (ಪ್ರೈ.) ಲಿಮಿಟೆಡ್, ೧೯೫೭ರಲ್ಲಿ ಶ್ರೀ ಸಿದ್ಧೇಶ್ವರ ಟೆಕ್ಸ್‌ಟೈಲ್ಸ್ ಮಿಲ್ಸ್ (ಪ್ರೈ.) ಲಿಮಿಟೆಡ್, ೧೯೬೮ರಲ್ಲಿ ಶ್ರೀ ಆಂಜನೇಯ ಕಾಟನ್ ಮಿಲ್ಸ್ (ಪ್ರೈ.) ಲಿಮಿಟೆಡ್ ಪ್ರಾರಂಭವಾದವು. ಇವುಗಳು ೧೯೯೦ರ ಕಾಲಕ್ಕೆ ತನ್ನ ಅಭಿವೃದ್ಧಿಯನ್ನು ಕಳೆದುಕೊಂಡವು.[೧೬]

ಕ್ರಿ.ಶ. ೧೬ನೇ ಶತಮಾನದಲ್ಲಿ ಮೈಸೂರು ಜಿಲ್ಲೆಯಲ್ಲಿ ಸಾಂಪ್ರದಾಯಿಕ ಕೈಗಾರಿಕೆಗಳು ಅಸ್ತಿತ್ವದಲ್ಲಿದ್ದುದನ್ನು ಕಾಣಬಹುದು. ಅವುಗಳಲ್ಲಿ ನೇಯ್ಗೆ, ಎಣ್ಣೆ ತೆಗೆಯುವ, ಕಂಚಿನ ಲೋಹದ ಕೈಗಾರಿಕೆ, ಉಪ್ಪಿನ ಕಾರ್ಖಾನೆ ಪ್ರಮುಖವಾದವುಗಳು. ಕುಡೆರು, ಸಳಿಯಾರು, ಕುಡಕೂರು, ಕುರಗಳ್ಳಿ, ಹಿರಿಯಪುರ, ಚಿಕ್ಕಪುರ, ಮಲ್ಲಿನಾಥಪುರ, ದೇವರಾಯಪುರ ಇತ್ಯಾದಿ ಬಟ್ಟೆ ಉತ್ಪಾದನೆಯ ಕೇಂದ್ರಗಳಾಗಿದ್ದವು.[೧೭] ಆಧುನಿಕ ಕಾಲಕ್ಕೆ ಬಂದರೆ ೧೯೧೧ರ ನಂತರ ಮೈಸೂರು ಜಿಲ್ಲೆಯಲ್ಲಿ ಎಕನಾಮಿಕ್ ಕಾನ್ಫರೆನ್ಸ್ (Economic Conference) ನಡೆದು, ಇದರ ಅಂಗವಾಗಿ ೧೯೧೩ರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ವಿಭಾಗವನ್ನು ಸ್ಥಾಪಿಸಲಾಯಿತು. ೧೯೧೯ರಲ್ಲಿ ಕೇಂದ್ರೀಯ ಮಂಡಳಿಯ ಸಹಯೋಗದೊಂದಿಗೆ ನಡೆದ ಎಕನಾಮಿಕ್ ಕಾನ್ಫರೆನ್ಸ್, ಕೈಗಾರಿಕೆಯಲ್ಲಿ ಶಾಶ್ವತವಾದ ಹಾಗೂ ಬದಲು ಮಾಡಬಹುದಾದ ಕೆಲವು ಗುಣಲಕ್ಷಣಗಳನ್ನು ತಿಳಿಸಿತು.[೧೮] ಇದರನ್ವಯ ಮೈಸೂರಿನ ಜನರಿಗೆ ಕೈಗಾರಿಕೆಗಳಲ್ಲಿ ತರಬೇತಿಗಾಗಿ ಕೆಲವು ವಿಶೇಷ ಸೌಲಭ್ಯಗಳನ್ನು ಹಾಗೂ ಭಾರತ ಮತ್ತು ಹೊರಗಿನ ದೇಶಗಳಿಂದ ಸಂಶೋಧನೆಗೆ ಧನಸಹಾಯವನ್ನು ನೀಡಿ ಪ್ರೋತ್ಸಾಹಿಸಲಾಯಿತು.

ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ೧೯೨೦ರಲ್ಲಿ ಮೈಸೂರಿನಲ್ಲಿ ಶ್ರೀ ಕೃಷ್ಣರಾಜೇಂದ್ರ ಮಿಲ್ಸ್ ಲಿಮಿಟೆಡ್ ಸ್ಥಾಪನೆಯಾಯಿತು. ಇದು ಕೆ.ಆರ್. ಮಿಲ್ ಎಂದೇ ಪ್ರಸಿದ್ಧಿಯನ್ನು ಪಡೆಯಿತು. ಕಾರ್ಖಾನೆಯು ವಾಸ್ಥಾಯನದಲ್ಲಿದ್ದ ೧೯೪೫ರಲ್ಲಿ ೨೨೧೬ ಕಾರ್ಮಿಕರು ಕಾರ್ಯವನ್ನು ನಿರ್ವಹಿಸುತ್ತಿದ್ದರು.[೧೯] ೧೯೩೨ರಲ್ಲಿ ಸ್ಥಾಪನೆಯಾದ 'ಗೌರ್ನಮೆಂಟ್ ಸಿಲ್ಕ್ ಫ್ಯಾಕ್ಟರಿ'ಯು ಬಟ್ಟೆಗಳನ್ನು ಉತ್ಪಾದಿಸುತ್ತಿತ್ತು. ೧೯೩೮ರಲ್ಲಿ 'ದ ಗೌರ್ನಮೆಂಟ್ ಸಿಲ್ಕ್ ಫಿಲೆಟ್ಯೂರ್' (The Government Silk Filature) ಸ್ಥಾಪನೆಯಾಯಿತು.

೧೯೪೫ರಲ್ಲಿ ಮೈಸೂರು ಜಿಲ್ಲೆಯಲ್ಲಿ ಬಟ್ಟೆಯನ್ನು ನೂಲುವ ಮತ್ತು ನೇಯುವ ದೊಡ್ಡ ಕಾರ್ಖಾನೆಗಳು ಸ್ಥಾಪನೆಯಾದವು. ಅವುಗಳಲ್ಲಿ ಮುಖ್ಯವಾಗಿ ರಾಜಲಕ್ಷ್ಮಿ ವೀವಿಂಗ್ ಫ್ಯಾಕ್ಟರಿ ಕಾರ್ಮಿಕರ ಸಂಖ್ಯೆ ೧೦, ಶ್ರೀ ಆಂಜನೇಯ ವೀವಿಂಗ್ ಫ್ಯಾಕ್ಟರಿ (೨೦), ಚಾಮುಂಡೇಶ್ವರಿ ವೀವಿಂಗ್ ಫ್ಯಾಕ್ಟರಿ (೧೦), ಮಾರುತಿ ಪವರ್ ಲೂಮ್ ಫ್ಯಾಕ್ಟರಿ (೧೦), ಜಯಚಾಮುಂಡೇಶ್ವರಿ ವೀವಿಂಗ್ ಫ್ಯಾಕ್ಟರಿ (೧೭), ಶ್ರೀ ಕನ್ಯಕಪರಮೇಶ್ವರಿ ವೀವಿಂಗ್ ಫ್ಯಾಕ್ಟರಿ (೩೨), ಶ್ರೀ ಸಂಜೀವರಾಯಸ್ವಾಮಿ ವೀವಿಂಗ್ ಫ್ಯಾಕ್ಟರಿ (೧೦), ಪದ್ಮನಾಭ ವೀವಿಂಗ್ ಫ್ಯಾಕ್ಟರಿ (೨೫), ಕಾಳಿ ವೀವಿಂಗ್ ಮತ್ತು ಡೈಯಿಂಗ್ ಫ್ಯಾಕ್ಟರಿ (೧೩), ದ ಗೌರ್ನಮೆಂಟ್ ಸಿಲ್ಕ್ ವೀವಿಂಗ್ ಫ್ಯಾಕ್ಟರಿ– ಮೈಸೂರು (೨೨೨), ಬಂದನವಾಲ ವೀವಿಂಗ್ ಅಂಡ್ ಸ್ಪಿನ್ನಿಂಗ್ ಸೆಂಟರ್– ಬಂದನವಾಲ (೬೩೦೦), ದ ಮೈಸೂರು ಸಿಲ್ಕ್ ಫಿಲೆಟ್ಯೂರ್ ಲಿಮಿಟೆಡ್– ಟಿ. ನರಸಿಪುರ (೨೮೦೦), ದ ಮೈಸೂರು ಸಿಲ್ಕ್ ಫಿಲೆಟ್ಯೂರ್ ಲಿಮಿಟೆಡ್ (೭೩೩), ದ ಸಿಲ್ಕ್ ಥ್ರೋಯಿಂಗ್ ಅಂಡ್ ವೀವಿಂಗ್ ಫ್ಯಾಕ್ಟರಿ (೬೮), ಇತ್ಯಾದಿ – ಬಟ್ಟೆಗೆ ಸಂಬಂಧಿಸಿದ ನೇಯ್ಗೆ ಮತ್ತು ನೂಲುವ ಕಾರ್ಖಾನೆಗಳು ಸ್ಥಾಪನೆಯಾದವು.

ಬೆಂಗಳೂರು ಜಿಲ್ಲೆಯಲ್ಲಿ ಪ್ರಥಮವಾಗಿ ೧೮೮೪ರಲ್ಲಿ ಬೆಂಗಳೂರು ಉಲ್ಲನ್, ಕಾಟನ್ ಮತ್ತು ಸಿಲ್ಕ್ ಮಿಲ್ ಕಂಪನಿ ಎಂಬ ಬಟ್ಟೆ ಕಾರ್ಖಾನೆ ಪ್ರಾರಂಭವಾಯಿತು. ಆರಂಭದಲ್ಲಿ ಸರಕಾರವೂ ಸಹ ಇದಕ್ಕೆ ೧೫,೦೦೦ರೂ.ಗಳ ಬಂಡವಾಳವನ್ನು ಹೂಡಿತ್ತು.[೨೦] ಅಂದರೆ ಇದರ ಅರ್ಥ ಕಾರ್ಖಾನೆಗಳ ಸ್ಥಾಪನೆಗೆ ಹಾಗೂ ಬೆಳವಣಿಗೆಗೆ ಸರ್ಕಾರ ನೀಡುತ್ತಿದ್ದ ಪ್ರೋತ್ಸಾಹ ವೇದ್ಯವಾಗುತ್ತದೆ. ಈ ಸಂದರ್ಭದಲ್ಲಿ ೧೦ನೇ ಚಾಮರಾಜ ಒಡೆಯರು ಮೈಸರಿನ ಮಹಾರಾಜರಾಗಿದ್ದರು (೧೮೬೮–೧೮೯೪). ಕೆ. ಶೇಷಾದ್ರಿ ಅಯ್ಯರ್ ದಿವಾನರಾಗಿದ್ದರು (೧೮೮೩–೧೯೦೦). ಹಾಗೆಯೇ ೧೮೮೮ರಲ್ಲಿ ಮೈಸೂರು ಮಿಲ್‌ಗೆ ಸರಕಾರ ಸಹಕಾರ ನೀಡಿತು. ಇದರ ಸ್ಥಾಪನೆಗೆ ನಿವೇಶನವನ್ನು ಹಂಚಿಕೆ ಮಾಡಿತು ಹಾಗೂ ಇತರ ಸೌಲಭ್ಯಗಳನ್ನು ಒದಗಿಸಿಕೊಟ್ಟಿತು.[೨೧]

೧೯೧೯ರಲ್ಲಿ ಮಿನರ್ವ ಮಿಲ್ ಸ್ಥಾಪನೆಯಾಯಿತು. ಇದು ಹತ್ತಿ ಬಟ್ಟೆಗಳ್ನು ಉತ್ಪಾದಿಸುತ್ತಿತ್ತು. ೧೯೨೨ರಲ್ಲಿ ಕೈಸರ್-ಐ-ಹಿಂದ್ ಉಲನ್ ಮಿಲ್ ಸ್ಥಾಪನೆಯಾಗಿ ಉಣ್ಣೆಯ ಕಂಬಳಿಗಳನ್ನು ಉತ್ಪಾದನೆ ಮಾಡುತ್ತಿತ್ತು.

ಸ್ವಾತಂತ್ರ್ಯ ಬಂದ ನಂತರ ೧೯೫೮ರಲ್ಲಿ ಗೋಪಾಲಕೃಷ್ಣ ಟೆಕ್ಸ್‌ಟೈಲ್ ಮಿಲ್ಸ್ (ಪ್ರೈ) ಲಿಮಿಟೆಡ್ ಬೆಂಗಳೂರಿನಲ್ಲಿ ಸ್ಥಾಪನೆಯಾತು. ೧೯೬೦ರಲ್ಲಿ ಶ್ರೀ ಕೃಷ್ಣ ಸ್ಪಿನ್ನಿಂಗ್ ಆ್ಯಂಡ್ ವೀವಿಂಗ್ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೬೩ರಲ್ಲಿ ಸುಭದ್ರ ಟೆಕ್ಸ್‌ಟೈಲ್ (ಪ್ರೈ) ಲಿಮಿಟೆಡ್ ಹಾಗೂ ೧೯೮೩ರಲ್ಲಿ ಪಂಚವರ್ಣ ಟೆಕ್ಸ್‌ಟೈಲ್ ಪ್ರೊಸೆಸಿಂಗ್ (ಪ್ರೈ) ಲಿಮಿಟೆಡ್ ಸ್ಥಾಪನೆಯಾಯಿತು.

## ೨.೨. ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಸಂದರ್ಭ

ಭಾರತದ ಚರಿತ್ರೆಯಲ್ಲಿ ಮೈಸೂರು ಸಂಸ್ಥಾನ ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ಇದು ವಿಶೇಷ ಚಾಪನ್ನು ಮೂಡಿಸಿದ್ದು ೧೮೩೦ ರಿಂದೀಚಗೆ, ಟಿಪ್ಪು ಮತ್ತು ಹೈದರ್ ಕಾಲದಲ್ಲಿ ಮೈಸೂರು ಸಂಸ್ಥಾನ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿತು. ಇವರ ಕಾಲ ಆಡಳಿತ ಕ್ರಮ, ವಾಣಿಜ್ಯ-ವ್ಯವಹಾರ, ಸೈನಿಕ ಪದ್ಧತಿ, ಹಣಕಾಸಿನ ವ್ಯವಹಾರ, ರಾಜಕೀಯ ವ್ಯವಹಾರ, ಧಾರ್ಮಿಕ ಧೋರಣೆ ಇತ್ಯಾದಿ ವಿಚಾರಗಳಿಂದ ಚರ್ಚೆಗೊಳಗಾಗಿದೆ. ಟಿಪ್ಪು ತನ್ನ ರಾಜ್ಯದಲ್ಲಿ ನೀರಾವರಿ, ಹೊಸ ರಸ್ತೆ ನಿರ್ಮಾಣ ಮತ್ತು ಕೆರೆ - ಬಾವಿಗಳ ಪುನರ್‌ರಚನೆಗೆ ಹೆಚ್ಚಿನ ಆಸಕ್ತಿ ವಹಿಸಿದ್ದ. ಆದರೆ ಟಿಪ್ಪುವಿನ ಆಡಳಿತ ಪರಿಷ್ಕರಣೆಗಳು ಆಗಿನ ಕಾಲಕ್ಕೆ ಮೀರಿದ್ದಾಗಿತ್ತು.[೨೨]

ಅಂತೆಯೇ ಸಂಸ್ಥಾನಿಕರ ದೃಷ್ಟಿಯಲ್ಲಿ ೧೮೮೧-೧೯೪೭ ಮಹತ್ವದ ಕಾಲವಾಗಿದೆ. ಏಕೆಂದರೆ ಈ ಸಂದರ್ಭದಲ್ಲಾದಂತಹ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ರಾಜಕೀಯ, ಕೈಗಾರಿಕೆ, ಕೃಷಿ, ನೀರಾವರಿ, ಇನ್ನಿತರ ಹಲವಾರು ಅಭಿವೃದ್ಧಿ ಕಾರ್ಯಗಳಿಂದ ಮೈಸೂರು ಭಾರತದಲ್ಲಿ ಮಾದರಿ ರಾಜ್ಯವಾಗಿ ಹೊರಹೊಮ್ಮಿತು. ಈ ಸಂದರ್ಭದ ಮೈಸೂರು ಸಂಸ್ಥಾನವನ್ನು ಗಾಂಧೀಜಿ ರಾಮರಾಜ್ಯ ಎಂದು ಕರೆದಿದ್ದರು. ಇದರ ಆದಾಯ, ಉತ್ಪತ್ತಿ, ಬಂಡವಾಳ ಇವೆಲ್ಲದರ ಪ್ರಗತಿ ದ್ವಿಮುಖಗೊಳ್ಳುತ್ತಾ ಹೋಯಿತು. ಈ ಕಾಲದಲ್ಲಿ ಬಂದಂತಹ ರಾಜರುಗಳು ಹಾಗೂ ದಿವಾನರುಗಳು ಬದಲಾವಣೆಗೆ ಮೈ ಒಡ್ಡಿ ನಿಂತರು. ಹಾಗೆಯೇ ದಿವಾನರ ಹತ್ತಿರ ಬ್ರಿಟಿಷರ ಸಲಿಗೆ ಎಷ್ಟಿತ್ತೆಂದರೆ ಭಾರತ ಸರ್ಕಾರದಿಂದ "ಖಾಸಗಿ"ಯೆಂದು ಬರುತ್ತಿದ್ದ ಪತ್ರಗಳನ್ನೆಲ್ಲಾ ದಿವಾನರಿಗೆ ತೋರಿಸುತ್ತಿದ್ದರು.[೨೩] ಈ ಸಂದರ್ಭದಲ್ಲಾದ (೧೮೮೧-೧೯೦೦) ರಾಜಕೀಯ-ಸಾಮಾಜಿಕ-ಶೈಕ್ಷಣಿಕ ಸುಧಾರಣೆಗಳ ಪರಿಣಾಮವೆಂದರೆ, ಬಹುಸಂಖ್ಯಾತ, ಆದರೆ ಹೆಚ್ಚಿನ ಜಾಗೃತಿ, ಅರಿವು ಇಲ್ಲದ ಜನರು ಕ್ರಮೇಣ ಜಾಗೃತಗೊಂಡರು.[೨೪]

ವಿಶ್ವೇಶ್ವರಯ್ಯನವರು ತಮ್ಮ ದಿವಾನ್ ಪದವಿಗೆ ರಾಜಿನಾಮೆ ನೀಡಿದ ನಂತರ ಕಾಂತರಾಜ ಅರಸರು ಮೈಸರೂ ಸಂಸ್ಥಾನದ ದಿವಾನರಾದರು. ಆ ಕಾಲ ಹಿಂದುಳಿದ ವರ್ಗಕ್ಕೆ ಪರ್ವ ಕಾಲ ಅಂತಲೇ ಹೇಳಬೇಕು. ಹಿಂದುಳಿದ ಬ್ರಾಹ್ಮಣೇತರ ಬೇಡಿಕೆಗಳ ಬಗ್ಗೆ ಅಧ್ಯಯನ ಮಾಡಿ ವರದಿ ಸಲ್ಲಿಸಲು ನೇಮಿಸಲಾದ ಮಿಲ್ಲರ್ ಸಮಿತಿಗೆ ಕಾಂತರಾಜರ ಪೂರ್ಣ ಬೆಂಬಲವಿತ್ತು. ೧೯೧೯ರ ಜುಲೈ ತಿಂಗಳಲ್ಲಿ ಸಮಿತಿ ತನ್ನ ವರದಿ ಸಲ್ಲಿಸಿತು.[೨೫] ಗ್ರಾಮಾಂತರ ಮತ್ತು ಕೃಷಿಯಾಧಾರಿತ ಕೈಗಾರಿಕೆಗಳಿಗೆ ಪ್ರೋತ್ಸಾಹವನ್ನು ಕೊಟ್ಟರು. ಸಂಸ್ಥಾನದ ಗ್ರಾಮಾಂತರ ಪ್ರದೇಶಗಳಲ್ಲಿ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ಹೆಚ್ಚಿಸಲು ಶಿಫಾರಸ್ಸು ಮಾಡಿದರು. ಕಂದಾಯ ಮತ್ತು ಆರ್ಥಿಕ ನೀತಿಯಲ್ಲಿ ಸುಧಾರಣೆ ತಂದರು.

ಇವೆಲ್ಲವುಗಳ ಹಿಂದೆ ಮಹಾರಾಜರ ಪಾತ್ರ ಪ್ರಮುಖವಾಗಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಗೆ ದಲಿತರ ವಿಷಯದಲ್ಲಿ ಕಾಳಜಿ ಇದ್ದಿತು. ದಲಿತರೂ ಸಹ ಅರಮನೆಯನ್ನು ಪ್ರವೇಶಿಸಬಹುದೆಂಬುದಾಗಿ ಹೇಳಿ, ಅದರಂತೆ ಅವಕಾಶ ಮಾಡಿಕೊಟ್ಟ ಭಾರತದ ಸಂಸ್ಥಾನದೀಶರುಗಳಲ್ಲಿಯೇ ನಾಲ್ವಡಿ ಅವರು ಮೊಟ್ಟ ಮೊದಲನೆಯವರು ಎಂಬುದಾಗಿ ಬ್ರಿಟ್ಯಾನಿಕ್ ವಿಶ್ವಕೋಶವು ಸಂತೃಪ್ತಿಯಿಂದ ಹೇಳಿದೆ.[೨೬] ಅಂತೆಯೇ ಮಹಿಳೆಯರ ಸುಧಾರಣೆಗೆ ಶ್ರಮಿಸಿದರು. ವಯಸ್ಕರಾಗಿದ್ದ ಹಿಂದೂ ವಿಧವೆಯರ ಶಿಕ್ಷಣಕ್ಕಾಗಿ ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ವಿಶೇಷ ಬಗೆಯ ಎರಡು ತರಗತಿಗಳನ್ನು ಆರಂಭಿಸಲಾಯಿತು.[೨೭] ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಶಿಕ್ಷಣ ನೀಡುವ ಪ್ರಮುಖ ಉದ್ದೇಶದಿಂದ ೧೯೧೩ರಲ್ಲಿ ನಜರಬಾದ್ ಅರಮನೆಯ ಬಂಗಲೆಯೊಂದರಲ್ಲಿ ವಾಣೀವಿಲಾಸ ಅರಸು ಗರ್ಲ್ಸ್ ಸ್ಕೂಲ್ ಹಾಗೂ ಚಾಮರಾಜೇಂದ್ರ ಅರಸು ಬೋರ್ಡಿಂಗ್ ಸ್ಕೂಲ್‌ಗಳನ್ನು ತಮ್ಮ ಧನಸಹಾಯದಿಂದ ಸ್ಥಾಪಿಸಿದರು. ೧೯೦೯ರಲ್ಲಿ ದೇವದಾಸಿ ನಿಷೇಧಾಜ್ಞೆ ಕಾನೂನು, ೧೯೩೬ ಜುಲೈ ೪ರಲ್ಲಿ ವೇಶ್ಯಾವೃತ್ತಿ ನಿಷೇಧಾಜ್ಞೆ ಕಾನೂನು, ೧೯೩೮ ಜುಲೈ ೭ರ ದಿ ಮೈಸೂರು ಹಿಂದೂ ವಿಡೋ ರೀಮ್ಯಾರೇಜ್ ಆಕ್ಟ್, ದಿ ಹಿಂದೂ ಲಾ ವುಮೆನ್ಸ್ ರೈಟ್ಸ್ ಆಕ್ಟ್ (೧೯೩೩ ಜೂನ್ ೨೯), ೧೯೩೭ರ 'ದಿ ಮೈಸೂರ್ ಮೆಟರ್ನಿಟಿ ಬೆನಿಫಿಟ್ ಆಕ್ಟ್, ಹೀಗೆ ಹಲವಾರು ಸುಧಾರಣ ಕ್ರಮಗಳನ್ನು ಕೈಗೊಂಡರು.

ಮೈಸೂರು ಸಂಸ್ಥಾನವು ೧೮೯೪ರಲ್ಲೇ ಕೃಷಿ ಬ್ಯಾಂಕನ್ನು ಸ್ಥಾಪಿಸುವುದರ ಮೂಲಕ ಕೃಷಿಕರಿಗೆ ಕಡಿಮೆ ಬಡ್ಡಿ ದರದಲ್ಲಿ ಮತ್ತು ಬಹು ಸುಲಭವಾಗಿ ಸಾಲ ದೊರೆಯುವಂತೆ ಮಾಡಿತು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗಾಗಿ ೧೯೦೮ರಲ್ಲಿ 'ಸೋಸಲೆ ಆದಿ ಕರ್ನಾಟಕ ಸಹಕಾರ ಸಂಘ'ವನ್ನು ಸ್ಥಾಪನೆ ಮಾಡಲಾಯಿತು. ಇದು ಕೃಷಿಗೆ ಬೇಕಾದ ಆಧುನಿಕ ಕೃಷಿ ಸಲಕರಣೆಗಳು, ಉತ್ತಮ ತಳಿಯ ರಾಸುಗಳು ಮತ್ತು ಬೀಜಗಳು, ರಾಸಾಯನಿಕ ಗೊಬ್ಬರ, ಕಬ್ಬು ಅರೆಯುವ ಯಂತ್ರಗಳು, ಹೆಚ್ಚು ಇಳುವರಿ ನೀಡುವ ಭತ್ತ, ರಾಗಿ, ಜೋಳ, ದ್ವಿದಳ ಧಾನ್ಯಗಳು ಮುಂತಾದವುಗಳನ್ನು ಒದಗಿಸುತ್ತಿದ್ದಿತು.

ಮಿರ್ಜಾ ಇಸ್ಮಾಯಿಲ್‌ರು ಸಹ ತಮ್ಮ ೧೫ ವರ್ಷಗಳ (೧೯೨೬-೧೯೪೧) ದಿವಾನ್ ಪದವಿಯಲ್ಲಿ ಹಲವಾರು ಸುಧಾರಣ ಕ್ರಮಗಳನ್ನು ತಂದು ಮೈಸೂರು ಸಂಸ್ಥಾನದ ಅಭಿವೃದ್ಧಿಗೆ ಶ್ರಮಿಸಿದರು. ಇವರ ಆರ್ಥಿಕ ನೀತಿಯನ್ನು ಸರಳವಾಗಿ "ಸ್ವದೇಶಿ ಆರ್ಥಿಕ ನೀತಿ"ಯೆಂದು ಹೇಳಬಹುದು.[೨೮] ಇವರ ಸ್ವದೇಶಿ ಧೋರಣೆ ಗಾಂಧೀಜಿಗೆ ಬಹಳ ಮೆಚ್ಚುಗೆಯಾಗಿತ್ತು. ಆರ್ಥಿಕ ಸಮ್ಮೇಳನಗಳನ್ನು (Economic Confrerence) ನಡೆಸಿ ಅದರ ಮೂಲಕ ಕೃಷಿ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದರು. ಹಾಗೆಯೇ ಬೆಂಗಳೂರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಸ್ಥಾಪನೆಯಾಯಿತು (೧೯೧೩). ಇದು ಕೈಗಾರಿಕೆಗಳ ಸ್ಥಾಪನೆಗೆ ಸಾಲವನ್ನು ನೀಡುತ್ತಿತ್ತು. ಆ ಸಂದರ್ಭಕ್ಕಾಗಲೇ ಬೆಂಗಳೂರು ಎರಡನೆಯ ರಾಜಧಾನಿ ಎಂಬ ಖ್ಯಾತಿಯನ್ನು ಹೊಂದಿತ್ತು.

ಭಾರತ ಕಾರ್ಖಾನೆಗಳ ಅಭಿವೃದ್ಧಿಗೆ ಕೇವಲ ಕೆಲವೇ ರಾಜ್ಯಗಳನ್ನಾಗಲಿ ಅಥವಾ ನಗರಗಳನ್ನಾಗಲಿ ಅವಲಂಬಿಸಿರಲಿಲ್ಲ. ಇಲ್ಲಿ ಪ್ರದೇಶಗಳ ವೈವಿಧ್ಯತೆಗೆ ಅನುಗುಣವಾಗಿ ಕಾರ್ಖಾನೆಗಳು ಉಗಮವಾಗಿದ್ದವು. ಉದಾಹರಣೆಗೆ ಹತ್ತಿ ಬೆಳೆಯುವ ಪ್ರದೇಶಗಳಲ್ಲಿ ಹತ್ತಿ ಕಾರ್ಖಾನೆ, ಸೆಣಬು ಬೆಳೆಯುವ ಪ್ರದೇಶಗಳಲ್ಲಿ ನಾರಿನ ಕಾರ್ಖಾನೆ, ಕಬ್ಬು ಬೆಳೆಯುವ ಪ್ರದೇಶಗಳಲ್ಲಿ ಸಕ್ಕರೆ ಕಾರ್ಖಾನೆ, ರೇಷ್ಮೆ ಬೆಳೆಯುವ ಪ್ರದೇಶಗಳಲ್ಲಿ ರೇಷ್ಮೆ ಕಾರ್ಖಾನೆ ಇತ್ಯಾದಿ. ಇದಕ್ಕೆ ಮೈಸೂರು ಸಂಸ್ಥಾನವೂ ಹೊರತಾಗಿರಲಿಲ್ಲ. ಇದು ಎಂಟು ಜಿಲ್ಲೆಗಳನ್ನು ಒಳಗೊಂಡಿದ್ದು ಮೈಸೂರು ಜಿಲ್ಲೆಯು ಹತ್ತಿಬಟ್ಟೆ, ರೇಷ್ಮೆ, ಸಾಬೂನು ಕಾರ್ಖಾನೆ, ಎಣ್ಣೆ ಗಿರಣಿಗಳು, ಇತ್ಯಾದಿ ಕಾರ್ಖಾನೆಗಳಿಗೆ ಪ್ರಸಿದ್ಧಿ ಹೊಂದಿತ್ತು. ಮಂಡ್ಯ ಜಿಲ್ಲೆಯು ಕಬ್ಬು ಬೆಳೆಗೆ ಮತ್ತು ಭತ್ತಕ್ಕೆ ಪ್ರಸಿದ್ಧಿಯನ್ನು ಹೊಂದಿದ್ದು ಇಲ್ಲಿ ಸಕ್ಕರೆ ಕಾರ್ಖಾನೆ ಮತ್ತು ಅಕ್ಕಿ ಗಿರಣಿಗಳು ಹೆಚ್ಚಾಗಿದ್ದವು. ಬೆಂಗಳೂರು ಜಿಲ್ಲೆಯು ಬಟ್ಟೆ ಕಾರ್ಖಾನೆಗಳಿಗೆ, ಚಿತ್ರದುರ್ಗ ಜಿಲ್ಲೆಯು ಹತ್ತಿಬಟ್ಟೆ ಕಾರ್ಖಾನೆಗಳಿಗೆ ಹಾಗೆಯೇ ಶಿವಮೊಗ್ಗ ಜಿಲ್ಲೆಯು ಕಾಫಿ ಬೆಳೆಗೆ ಪ್ರಸಿದ್ಧಿಯನ್ನು ಪಡೆದಿತ್ತು. ಅಂತೆಯೇ ಕೋಲಾರವು ಗಣಿಗಾರಿಕೆಗೆ ಹೆಸರುವಾಸಿಯಾಗಿದ್ದಿತು. ಒಟ್ಟಾರೆ ಎಲ್ಲಾ ಜಿಲ್ಲೆಗಳು ಆಯಾ ಪ್ರದೇಶಗಳಿಗೆ, ವಾತಾವರಣಕ್ಕೆ ಹೊಂದಿಕೊಂಡಂತೆ ಅಭಿವೃದ್ಧಿಯನ್ನು ಹೊಂದಿತ್ತು. ಇವೆಲ್ಲವುದರ ಒಟ್ಟಾರೆ ಪ್ರಗತಿಯಿಂದ ಮೈಸೂರು ಸಂಸ್ಥಾನ ಸಾಂಸ್ಕೃತಿಕವಾಗಿ ಪ್ರಗತಿಯನ್ನು ಸಾಧಿಸಿತ್ತು ಅಂತಲೇ ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೧.

೨. ರಾವ್.ಎಸ್.ಆರ್., (ಸಂ.), ಬೆಂಗಳೂರು ಥ್ರೂ ದ ಏಜಸ್, ಪು. ೨೨.

೩. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೧.

೪. ಅದೇ.

೫. ಚಂದ್ರಮೌಳಿ ಕೆ. ಬೆಂಗಳೂರಿನ ನೋಟಗಳು, ೨೦೦೨, ಪು. ೧೪೭.

೬ ರಾವ್.ಎಸ್.ಆರ್. (ಸಂ.), ಬೆಂಗಳೂರು ಥ್ರೂ ದ ಏಜಸ್, ಪು. ೫೨.

೭ ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೬

೮. ಸೂರ್ಯನಾಥ್ ಯು. ಕಾಮತ್ (ಸಂ.), ಕರ್ನಾಟಕ ಸ್ಟೇಟ್ ಗೆಜೆಟಿಯರ್, ಬೆಂಗಳೂರು ಡಿಸ್ಟ್ರಿಕ್ಟ್, ೧೯೯೦, ಪು. ೨೬೬

೯. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೩೬

೧೦. ಈಶ್ವರಪ್ಪ ಎಂ.ಜಿ., (ಸಂ.), ಶತಮಾನದ ದಾವಣಗೆರೆ, ೨೦೦೦, ಪು. ೪೧.

೧೧. ಎಚ್ಚಾರ್ಕೆ, ಭಾರತದ ಆರ್ಥಿಕ ವ್ಯವಸ್ಥೆ, ೧೯೯೬, ಪು. ೩೮೬.

೧೨. ಅದೇ.

೧೩. ಅದೇ.

೧೪. ಕುಮಾರ್ ಬಿ.ಪಿ., ದಾವಣಗೆರೆ ಹತ್ತಿಗಿರಣಿ ಕಾರ್ಮಿಕರ ಚಳವಳಿಗಳು, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು. ೨೭

೧೫. ಈಶ್ವರಪ್ಪ ಎಂ.ಜಿ. (ಸಂ.), ಶತಮಾನದ ದಾವಣಗೆರೆ, ೨೦೦೦, ಪು. ೪೨.

೧೬. ಕುಮಾರ್ ಬಿ.ಪಿ., ದಾವಣಗೆರೆ ಹತ್ತಿಗಿರಣಿ ಕಾರ್ಮಿಕರ ಚಳವಳಿಗಳು, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು. ೩೩

೧೭. ಸೂರ್ಯನಾಥ ಯು. ಕಾಮತ್ (ಮು.ಸಂ.), ಕರ್ನಾಟಕ ಸ್ಟೇಟ್ ಗೆಜೆಟಿಯರ್, ಮೈಸೂರು ಡಿಸ್ಟ್ರಿಕ್ಟ್, ಪು. ೨೬೩.

೧೮. ಅದೇ., ಪು. ೨೬೪.

೧೯. ಅದೇ., ಪು. ೨೬೫.

೨೦. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು. ೪೧.

೨೧. ಸೂರ್ಯನಾಥ ಯು. ಕಾಮತ್ (ಮು.ಸಂ.), ಕರ್ನಾಟಕ ಸ್ಟೇಟ್ ಗೆಜೆಟಿಯರ್, ಭಾಗ-೨, ೧೯೮೩, ಪು. ೨೬೯.

೨೨. ಮೋಹನ್‌ಕೃಷ್ಣ ರೈ ಕೆ. (ಸಂ.), ಚರಿತ್ರೆ ಅಧ್ಯಯನ ಸಂ. ೩, ಸಂಚಿಕೆ ೧, ೨೦೦೭, ಪು. ೯೭.

೨೩. ಚಂದ್ರಶೇಖರ್ ಎಸ್., ವಸಾಹತುಕಾಲೀನ ಕರ್ನಾಟಕ, ೨೦೦೫, ಪು. ೨೧೧.

೨೪. ಅದೇ., ಪು. ೨೧೮.

೨೫. ಅದೇ., ಪು. ೨೩೫.

೨೬. ಲಕ್ಷ್ಮಣ್ ತೆಲಗಾವಿ (ಸಂ)., ಲೇಖಕರು: ಚಿನ್ನಸ್ವಾಮಿ ಸೋಸಲೆ ಎನ್., ಚರಿತ್ರೆ ಅಧ್ಯಯನ, ೨೦೦೫, ಪು. ೨೯.

೨೭ ಅದೇ., ಪು. ೩೧

೨೮. ಚಂದ್ರಶೇಖರ್ ಎಸ್., ವಸಾಹತುಕಾಲೀನ ಕರ್ನಾಟಕ, ೨೦೦೬, ಪು. ೨೬೭.

ಅಧ್ಯಾಯ ೩

## ಬಿನ್ನಿಮಿಲ್ ಕಾರ್ಖಾನೆಯ ಅಸ್ಮಿತೆಗಳು

೩.೧. ಮಿಲ್ ಸ್ಥಾಪನೆಗೆ ಹಿನ್ನೆಲೆ, ಕಾರಣ ಹಾಗೂ ಮಹನೀಯರ ಪಾತ್ರ

೩.೨. ಮಿಲ್ ಸ್ಥಾಪನೆಯಿಂದ ಉಂಟಾದ ಸಾಂಸ್ಕೃತಿಕ ಪ್ರಗತಿ

೩.೩. ಮಿಲ್‌ನ ಉಚ್ಛ್ರಾಯ ಕಾಲ

೩.೪. ದೇಶ-ವಿದೇಶ ಸಂಬಂಧ

೩.೫. ಬೆಂಗಳೂರು ನಗರಾಭಿವೃದ್ಧಿಗೆ ಮಿಲ್‌ನ ಪಾತ್ರ

ವಸಾಹತು ಭಾರತದ ಅರ್ಥವ್ಯವಸ್ಥೆಯು ಕೆಲವೇ ಸೀಮಿತ ಪ್ರದೇಶಗಳಲ್ಲಿ ವ್ಯವಸ್ಥಿತವಾದ ಬಂಡವಾಳಶಾಹಿ ಕೈಗಾರಿಕೆಯ ಬೆಳವಣಿಗೆಗೆ ಆಸ್ಪದ ನೀಡಿತು. ಬ್ರಿಟಿಷರು ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದ ವೇಳೆಗೆ ಮುಖ್ಯವಾಗಿ ತೋಟದ ಉದ್ಯಮ ಹಾಗೂ ಗಣಿಗಳಂತಹ ಉದ್ಯಮಗಳಿಗೆ ಪ್ರೋತ್ಸಾಹ ನೀಡಿದರು. ಪಶ್ಚಿಮ ಭಾರತದ ಮುಂಬಯಿ ಮತ್ತು ಅಹಮದಾಬಾದ್ ಗಳಲ್ಲಿನ ಕೆಲವು ಬಂಡವಾಳಗಾರರು ಬಹಳ ಪರಿಶ್ರಮದಿಂದ ಭಾರತದ ಮೊಟ್ಟ ಮೊದಲನೆಯ ಹತ್ತಿ ಕಾರ್ಖಾನೆಯನ್ನು ಸ್ಥಾಪಿಸಿದರು.[೧] ಹೀಗೆ ಇಪ್ಪತ್ತನೆಯ ಶತಮಾನಕ್ಕೆ ಕಾಲಿಡುವ ವೇಳೆಗೆ ಕೆಲವು ಪ್ರದೇಶಗಳು ಕೆಲವು ವಿಶೇಷ ಕೈಗಾರಿಕೆಗಳಲ್ಲಿ ತಕ್ಕಮಟ್ಟಿಗೆ ಅಭಿವೃದ್ಧಿ ಹೊಂದಿದ್ದವು. ಅಸ್ಸಾಮಿನಲ್ಲಿ ಪ್ಲಾಂಟೇಷನ್‌ಗಳು, ಬಂಗಾಳದಲ್ಲಿ ಸೆಣಬು ಗಿರಣಿಗಳು, ಬಂಗಾಳದಲ್ಲಿ ಕಲ್ಲಿದ್ದಲು ಗಣಿಗಳು, ಅಹಮದಾಬಾದ್ ಮತ್ತು ಮುಂಬಯಿಯಲ್ಲಿ ಬಟ್ಟೆ ಗಿರಣಿಗಳು ಗಣನೀಯವಾಗಿ ಬೆಳೆದಿದ್ದವು. ಆದರೆ ಭಾರತದ ವಿಶಾಲ ಗ್ರಾಮಾಂತರ ಪ್ರದೇಶಗಳು ಕೈಗಾರಿಕೆಗಳ ನಾಶದ (De-industrialisation) ಪರಿಣಾಮದಿಂದ ಇನ್ನೂ ಚೇತರಿಸಿಕೊಳ್ಳಬೇಕಾಗಿತ್ತು. ಬ್ರಿಟಿಷ್ ಇಂಡಿಯಾದ ಪರಿಸ್ಥಿತಿಯೇ ಹೀಗಿದ್ದರೆ ಮೈಸೂರಿನಂತಹ ಸಂಸ್ಥಾನಗಳಲ್ಲಿ ಅದು ಇನ್ನೂ ನಿರುತ್ಸಾಹಕರವಾಗಿತ್ತು. ಇಲ್ಲೇನಿದ್ದರೂ ಬೃಹತ್ ಪ್ರಮಾಣದ ಬಂಡವಾಳ ಹೂಡಿಕೆ ಎನ್ನುವುದು ಮೂರು ಸ್ಥಳಗಳಿಗೆ ಮಾತ್ರ ಸೀಮಿತವಾಗಿತ್ತು.[೨] ಪಶ್ಚಿಮ ಮೈಸೂರು ಕಾಫಿ ಮತ್ತು ಅಡಕೆ ತೋಟಗಳು, ಕೋಲಾರವು ಚಿನ್ನದ ಗಣಿಗಳಿಗೆ ಹಾಗೂ ಬೆಂಗಳೂರು ವಿವಿಧ ಮಿಲ್‌ಗಳು, ಗಿರಣಿಗಳು, ಕಾರ್ಖಾನೆಗಳು ಈ ಸಾಲಿನಲ್ಲಿ ಬರುವಂತವುಗಳಾಗಿದ್ದವು. ಇವುಗಳಲ್ಲಿ ತೋಟದ ಉದ್ಯಮವು ವರ್ಷದಲ್ಲಿ ಕೆಲ ಸಮಯ ಬಹಳ ಸಂಖ್ಯೆಯಲ್ಲಿ ಪುರುಷರು ಮತ್ತು ಮಹಿಳೆಯರು ಇಬ್ಬರನ್ನೂ ಕೆಲಸಗಳಿಗೆ ನೇಮಿಸಿಕೊಳ್ಳುತ್ತಿದ್ದಿತು. ಬೆಂಗಳೂರಿನಲ್ಲಿ ಹೇಳಿಕೊಳ್ಳುವಂತಹ ಎರಡು ಬಟ್ಟೆ ಕಾರ್ಖಾನೆಗಳಿದ್ದವು. ಒಂದು ಬೆಂಗಳೂರು ಉಲನ್, ಕಾಟನ್, ಅಂಡ್ ಸಿಲ್ಕ್ ಮಿಲ್ಸ್ (ಮುಂದೆ ಇದೇ ಬಿನ್ನಿಮಿಲ್ ಆಯಿತು) ಇನ್ನೊಂದು ಮಹಾರಾಜ ಮಿಲ್.

ಬಿನ್ನಿಮಿಲ್ ಕಾರ್ಖಾನೆಯ ಬಗ್ಗೆ ಹೇಳುವುದಾದರೆ ಅದು ಹಲವು ಮುಖಗಳಲ್ಲಿ ತನ್ನ ಅಸ್ಮಿತೆಯನ್ನು ಕಂಡುಕೊಂಡಿದೆ. ಇದು ಕಾರ್ಮಿಕರಿಗೆ ಕೆಲಸವನ್ನು ನೀಡಿದುದಲ್ಲದೆ, ಅವರ ಜೀವನ ನಿರ್ವಹಣೆಯನ್ನು ಸಾಗಿಸಲು ಸಹಾಯಕವಾಗಿತ್ತು. ಭಿನ್ನ ಭಿನ್ನ ಜನರು ಕಾರ್ಖಾನೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದರಿಂದ ಭಿನ್ನ ಭಿನ್ನ ಸಂಸ್ಕೃತಿ ಮೇಳೈಸಲು ಈ ಮಿಲ್ ಕಾರಣವಾಯಿತು. ಇದರಿಂದ ಕಾರ್ಮಿಕರ ಆರ್ಥಿಕ ಹಾಗೂ ಸಾಮಾಜಿಕ ಜೀವನ ಬದಲಾವಣೆಯನ್ನು ಪಡೆದುಕೊಂಡಿತು.

ಮಿಲ್‌ನ ಉಚ್ಛ್ರಾಯ ಕಾಲದ ಸಂದರ್ಭದಲ್ಲಿ (೧೯೧೦ರ ನಂತರ) ಅಧಿಕ ಉತ್ಪಾದನೆಯನ್ನು ಕಂಡು ಹೆಚ್ಚಿನ ಲಾಭವನ್ನು ಗಳಿಸುವ ಮೂಲಕ ತನ್ನ ಅಸ್ಮಿತೆಯ ಇನ್ನೊಂದು ಮುಖವನ್ನು ಹೊರಚಾಚಿತು. ಇದರಿಂದ ದೇಶ-ವಿದೇಶ ಸಂಬಂಧ ವೃದ್ಧಿಸುವಲ್ಲಿ ನೆರವಾಯಿತು. ಅಂತೆಯೇ ಬೆಂಗಳೂರು ನಗರದ ಅಭಿವೃದ್ಧಿಗೂ ಈ ಮಿಲ್ ಪರೋಕ್ಷವಾಗಿ ಶ್ರಮಿಸಿತು ಅಂತಲೇ ಹೇಳಬಹುದು.

ಒಂದು ಕಾರ್ಖಾನೆ ಎಂದರೆ ಅದರ ಸ್ಥಾಪನೆಯಿಂದ ಕಾರ್ಮಿಕರು, ಕಾರ್ಮಿಕರಿಂದ ಸಂಘಟನೆ, ಸಂಘಟನೆಯಿಂದ ಹೋರಾಟ ಸರ್ವೇಸಾಮಾನ್ಯ ಬಿನ್ನಿಮಿಲ್ ವಿಷಯದಲ್ಲಿಯೂ ಆಗಿದ್ದು ಅದೇ. ಹೀಗಾಗಿ ಇದರ ಅಸ್ಮಿತೆಯ ಹುಡುಕಾಟವನ್ನು ಇಲ್ಲೂ ಕಾಣಬಹುದು. ಕಾರ್ಮಿಕ ಸಂಘಟನೆಗಳು ಅಂದಮೇಲೆ ಅವುಗಳು ರಾಜಕೀಯದೊಂದಿಗೆ ಬೆಸೆದುಕೊಂಡಿರುವುದು ಜಗಜ್ಜಾಹಿರ, ಅಂತೆಯೇ ಬಿನ್ನಿಮಿಲ್ ಕಾರ್ಮಿಕ ಸಂಘಟನೆಯು ಕಾಂಗ್ರೆಸ್‌ನೊಂದಿಗೆ, ಅದರ ನಾಯಕರುಗಳ ಬಾಲವನ್ನು ಹಿಡಿದುಕೊಂಡು ಹೊರಟಿದ್ದಿದು ಅಷ್ಟೇ ಸತ್ಯ. ಇಲ್ಲೂ ಇದರ ಅಸ್ಮಿತೆಯನ್ನು ಕಾಣಬಹುದು. ಅಲ್ಲದೆ ಕಾರ್ಮಿಕರು ಸ್ವಾತಂತ್ರ್ಯ ಸಂಗ್ರಾಮಕ್ಕೆ ಹಾಗೂ ಏಕೀಕರಣಕ್ಕೆ ನೀಡಿದ ಕೊಡುಗೆಯನ್ನು ಗುರುತಿಸಬಹುದು. ಹೀಗಾಗಿ ಬಿನ್ನಿಮಿಲ್ ಕಾರ್ಖಾನೆಯು ಹಲವು ಮುಖಗಳ ಅಸ್ಮಿತೆಯನ್ನು ಹೊಂದಿದೆ.

### ೩.೧. ಮಿಲ್ ಸ್ಥಾಪನೆಗೆ ಹಿನ್ನೆಲೆ, ಕಾರಣ ಹಾಗೂ ಮಹನೀಯರ ಪಾತ್ರ

ಮೈಸೂರು ಸಂಸ್ಥಾನದ ವ್ಯಾಪ್ತಿಗೆ ಒಳಪಟ್ಟಿದ್ದ ಬೆಂಗಳೂರಿನಲ್ಲಿ ೧೮೫೦ರ ನಂತರ ಅನೇಕ ಕೈಗಾರಿಕೆಗಳು ಪ್ರವರ್ಧಮಾನಕ್ಕೆ ಬಂದವು. ಅವುಗಳಲ್ಲಿ ಬಿನ್ನಿಮಿಲ್ ಎಂದು ಖ್ಯಾತಿ ಹೊಂದಿದ ಉಣ್ಣೆ, ಹತ್ತಿ ಮತ್ತು ರೇಷ್ಮೆ ಕಾರ್ಖಾನೆಯು ಒಂದು ಪ್ರಮುಖವಾದುದು.

ಬ್ರಿಟಿಷ್ ವಸಾಹತುಶಾಹಿಯ ಆಳ್ವಿಕೆಗೆ ಒಳಪಟ್ಟಿದ್ದ ಮೈಸೂರು ಸಂಸ್ಥಾನದಲ್ಲಿ ಯಾವುದೇ ಕಾರ್ಖಾನೆಗಳು ಪ್ರಾರಂಭವಾಗಬೇಕಾದರೂ ಬ್ರಿಟಿಷರ ಪೂರ್ವಾನುಮತಿ ಇರಲೇಬೇಕಾಗಿತ್ತು. ಅಲ್ಲದೆ ಕೆಲವೊಮ್ಮೆ ಆ ಕಾರ್ಖಾನೆಗಳ ಬಂಡವಾಳ, ನಿರ್ವಹಣಾ ಉಸ್ತುವಾರಿಯನ್ನು ಇವರೇ

ನೋಡಿಕೊಳ್ಳುತ್ತಿದ್ದರು. ಬಿನ್ನಿಮಿಲ್ ಸಹ ಇವರ ಬಂಡವಾಳ, ನಿರ್ವಹಣಾ ಉಸ್ತುವಾರಿಯಲ್ಲಿ ಬಂದ ಕಾರ್ಖಾನೆಯಾಗಿದ್ದಿತು.

ಆಧುನಿಕ ತಂತ್ರಜ್ಞಾನದಲ್ಲಿ ತರಬೇತಿ ನೀಡಲೆಂದೇ, ೧೮೬೦ರಲ್ಲಿ ಸ್ಕೂಲ್ ಆಫ್ ಇಂಜಿನಿಯರಿಂಗ್ ಅನ್ನು ಸರ್ಕಾರ ಬೆಂಗಳೂರಿನಲ್ಲಿ ಆರಂಭಿಸಿತು. ಇದರಲ್ಲಿ ಸಿವಿಲ್ (ಕಾಮಗಾರಿ) ಓವರ್‌ಸಿಯರಿಗೆ ಮುಖ್ಯವಾಗಿ ತರಬೇತಿ ದೊರೆಯುತ್ತಿತ್ತು. ಇದೇ ರೀತಿ ರಾವ್‌ಬಹದೂರ್ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್ ೧೯೦೩ರಲ್ಲಿ ಒಂದು ತಾಂತ್ರಿಕ ಶಾಲೆ ಆರಂಭಿಸಿದರು. ಅದು ಇಂದಿಗೂ ಇದೆ. ಸ್ಟಾಂಡಿಷ್ ಲೀ ಎಂಬುವವರು ಇಂಜಿನಿಯರಿಂಗ್ ಸ್ಕೂಲ್‌ನ ಪ್ರಿನ್ಸಿಪಾಲರಾಗಿದ್ದರು. ಇವರು ೧೮೭೭ರಲ್ಲಿ ಬೆಂಗಳೂರಿನಲ್ಲಿ ಒಂದು ಕಾರ್ಖಾನೆಯನ್ನು ಪ್ರಾರಂಭಿಸಲು ಪ್ರಯತ್ನಿಸಿದವರಲ್ಲಿ ಮೊದಲಿಗರು. 'ದ ಬೆಂಗಳೂರು ಸ್ಟೀಮ್ ಉಲನ್ ಮಿಲ್ಸ್' ಎಂಬುದಾಗಿ ಈ ಕಾರ್ಖಾನೆಗೆ ಹೆಸರಿಡಲಾಯಿತು.[೪] ಇದು ಪ್ರಾರಂಭದಲ್ಲಿ ರತ್ನಗಂಬಳಿ ಅಥವಾ ಜಮಖಾನೆಗಳನ್ನು ಉತ್ಪಾದನೆ ಮಾಡುತ್ತಿತ್ತು. ಜೈಲಿನಲ್ಲಿ ಉತ್ಪಾದನೆಯಾಗುತ್ತಿದ್ದ ವಸ್ತುಗಳೊಂದಿಗೆ ಈ ಕಾರ್ಖಾನೆ ಸ್ಪರ್ಧೆಗಿಳಿದರೂ ಯಾವುದೇ ನಷ್ಟವನ್ನು ಅನುಭವಿಸಲಿಲ್ಲ. ಕಾರಣ ಇದರಿಂದ ಉತ್ಪಾದನೆಯಾಗುತ್ತಿದ್ದ ಅದೇ ಗುಣಮಟ್ಟದ ವಸ್ತುಗಳು ಕಡಿಮೆ ದರದಲ್ಲಿದ್ದವು. ಎಸ್.ಲೀಯವರು ತಾವು ತಯಾರಿಸುತ್ತಿದ್ದ ನೇಯ್ಗೆಗೆ ೧೨ ಹಾರ್ಸ್ ಪವರ್‌ನ ಒಂದು ಉಗಿಯಂತ್ರವನ್ನು ೧೮೭೯ರಲ್ಲಿ ಅಳವಡಿಸಿದರು. ಇದನ್ನು ಅಳವಡಿಸಲು ೪೬೨೪ ರೂ. ವೆಚ್ಚವಾಗಿತ್ತು.[೫] ಈ ಯಂತ್ರ ಅಗ್ಗದಲ್ಲಿ ವಸ್ತುಗಳನ್ನು ಉತ್ಪಾದನೆ ಮಾಡುವುದನ್ನು ಕಂಡು ಸಂಸ್ಥಾನದ ಸರಕಾರವು ಈ ಕಾರ್ಖಾನೆಯ ಕೆಲವು ಷೇರುಗಳನ್ನು ಕೊಂಡಿತು.

ಸ್ಟಾಂಡಿಷ್ ಲೀ ಯವರು ಜೈಲಿನ ಕಾರ್ಮಿಕರನ್ನು ತಮ್ಮ ಕಾರ್ಖಾನೆಗೆ ಕಳುಹಿಸಿಕೊಡುವಂತೆ ಅಧಿಕಾರಿಗಳಿಗೆ ಅರ್ಜಿಯನ್ನು ಸಲ್ಲಿಸಿದರೂ ಯಾವುದೇ ಪ್ರಯೋಜನವಾಗಲಿಲ್ಲ. ಬದಲಾಗಿ ಲಾರ್ಡ್ ರಿಪ್ಪನ್‌ನ ಕಾರ್ಖಾನೆಯಲ್ಲಿ ಮಿಲಿಟರಿ ವಸ್ತುಗಳನ್ನು ಪೂರೈಸುವುದಕ್ಕೆ ಕಳುಹಿಸಿಕೊಟ್ಟಿತು.[೬] ಆ ವೇಳೆಗಾಗಲೇ ಲೀಯು ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್‌ನನ್ನು ತನ್ನ ಕಾರ್ಖಾನೆಗೆ ಪಾಲುದಾರನನ್ನಾಗಿ ಮಾಡಿಕೊಂಡಿದ್ದರು. ಆದರೆ ಈ ಮಿಲ್ ತನ್ನ ದಿಕ್ಕನ್ನು ಬದಲಾಯಿಸಿ ಮೈ ಕೊಡವಿನಿಂತದ್ದು ಬ್ರಿಟಿಷ್ ಮ್ಯಾನೇಜಿಂಗ್ ಏಜೆಂಟ್ ಆದ ಬಿನ್ನಿ ಮತ್ತು ಕಂಪನಿ ತನ್ನ ತೆಕ್ಕೆಗೆ ತೆಗೆದುಕೊಂಡ ಮೇಲೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಲೀ, ಮೊದಲಿಯರ್ ಮತ್ತು ಬಿನ್ನಿ ಮೂವರೂ ಮಿಲ್‌ನ ನಿರ್ಮಾತೃಗಳೇ, ಲೀ ಯು ಈ ಕಾರ್ಖಾನೆಯನ್ನು ಹುಟ್ಟುಹಾಕಿದರೆ, ಮೊದಲಿಯಾರ್ ಇದರ ಬೆಳವಣಿಗೆಗೆ ಕೈ ಜೋಡಿಸಿದ, ಬಿನ್ನಿಯು ಇದಕ್ಕೆ

ಮರುಜೀವವನ್ನು ಕೊಟ್ಟ ಹೀಗಾಗಿ ಈ ಮೂವರು ಮಹನೀಯರುಗಳನ್ನು ಬಿನ್ನಿಮಿಲ್‌ನ ಪಿತಾಮಹರುಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ನಂತರದ ದಿನಗಳಲ್ಲಿ ಮೈಸೂರಿನ ಮಹಾರಾಜರುಗಳು ಮತ್ತು ಸಂಸ್ಥಾನ ಇದರ ಅಭಿವೃದ್ಧಿಗೆ ಪ್ರೋತ್ಸಾಹ ಹಾಗೂ ನೆರವನ್ನು ನೀಡಿತು. ಅದು ನಿವೇಶನವನ್ನು ನೀಡುವುದರ ಮೂಲಕವಾಗಿರಬಹುದು, ಷೇರುಗಳನ್ನು ಕೊಂಡುವುದರ ಮೂಲಕವಾಗಿರಬಹುದು, ಮತ್ತಾವುದೇ ದಾರಿಯ ಮೂಲಕ ಬಿನ್ನಿಮಿಲ್ ಕಾರ್ಖಾನೆಯ ಯಶಸ್ಸಿಗೆ ಕೈ ಜೋಡಿಸಿ ನಿಂತರು. ಇದರಲ್ಲಿ ದಿವಾನರುಗಳ ಪಾತ್ರವೂ ಗಣ್ಯ ಇಲ್ಲಿ ಮಹಾರಾಜರುಗಳು ಹಾಗೂ ದಿವಾನರುಗಳು ಬಿನ್ನಿಮಿಲ್ ಏಳಿಗೆಗೆ ಶ್ರಮಿಸಿದ ಮಹನೀಯರುಗಳೇ.

ಬೆಂಗಳೂರು ಉಣ್ಣೆ, ಹತ್ತಿ ಮತ್ತು ರೇಷ್ಮೆ ಮಿಲ್ (Bangalore Woollen Cotton and Silk Mills Company Limited) ೧೮೮೬ರಲ್ಲಿ ಬಿನ್ನಿಮಿಲ್ ಎಂಬ ನಾಮವನ್ನು ಹೊಂದಿತು. ೧೮೮೮ರಲ್ಲಿ ಈ ಘಟಕದಿಂದ ಹತ್ತಿಯ ನೂಲು, ಉಣ್ಣೆ ಹಾಗೂ ಅದರ ಬಿಡಿ ಸರಕುಗಳು, ಹತ್ತಿ ಮತ್ತು ರೇಷ್ಮೆ ಬಟ್ಟೆಗಳನ್ನು ಉತ್ಪಾದನೆ ಮಾಡಲಾಗುತ್ತಿತ್ತು. ಈ ಸಂದರ್ಭದಲ್ಲಿ ಇದರ ಬಂಡವಾಳ ಹತ್ತು (೧೦) ಲಕ್ಷ ರೂ.ಗಳಾಗಿದ್ದಿತು. ಮೈಸೂರು ಸರ್ಕಾರ ೧೫,೦೦೦ ರೂ. ಮೌಲ್ಯದ ಷೇರುಗಳನ್ನು ಕೊಂಡಿತು. ೧೯೨೧ರಲ್ಲಿ ಇದರ ಒಟ್ಟು ಬಂಡವಾಳ ೨೬.೨೫ ಲಕ್ಷ ರೂ.ಗಳಿದ್ದು ೩೩೦೭ ಜನರಿಗೆ ಉದ್ಯೋಗವನ್ನು ಒದಗಿಸಿಕೊಟ್ಟಿತ್ತು. ಅಭಿವೃದ್ಧಿಯ ಉಚ್ಛ್ರಾಯ ಸ್ಥಿತಿಯನ್ನು ಹೊಂದಿದ ಈ ಮಿಲ್ ೧೯೯೮ರಲ್ಲಿ ತನ್ನ ಕಾರ್ಯವನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿ ಇಂದು ಕೇವಲ ಕಟ್ಟಡ ಅವಶೇಷಗಳೊಂದಿಗೆ ಮಾತ್ರ ಉಳಿದಿದೆ.

**೩.೨. ಮಿಲ್ ಸ್ಥಾಪನೆಯಿಂದ ಉಂಟಾದ ಸಾಂಸ್ಕೃತಿಕ ಪ್ರಗತಿ**

ಬಿನ್ನಿಮಿಲ್ ಸ್ಥಾಪನೆಯಿಂದ ಬೆಂಗಳೂರು ನಗರವು ಸಾಂಸ್ಕೃತಿಕವಾಗಿ ಪ್ರಗತಿಯನ್ನು ಸಾಧಿಸಿತು. ಮುಖ್ಯವಾಗಿ ಕಾರ್ಮಿಕರು ಇಲ್ಲಿಗೆ ಬಂದು ನೆಲೆಸಿದ್ದರಿಂದ ಪೇಟೆಗಳು ಅಭಿವೃದ್ಧಿಯನ್ನು ಹೊಂದಿದವು. ಬಿನ್ನಿಮಿಲ್ ಕಾರ್ಮಿಕ ವರ್ಗ ವಾಸಮಾಡುವ ಪ್ರದೇಶವು ಶಾಂತಿಗೆ ಹೆಸರುವಾಸಿಯಾಗಿತ್ತು. ಬೆಂಗಳೂರಿನ ಪೇಟೆ ಪ್ರದೇಶಗಳಾದ ದೊಡ್ಡಪೇಟೆ, ಚಿಕ್ಕಪೇಟೆ, ಅಕ್ಕಿಪೇಟೆ, ಅಲ್ಲೂರಪೇಟೆ, ಕಬ್ಬನ್‌ಪೇಟೆ, ಗುಡುಮಾಯಿಪೇಟೆ ಪ್ರದೇಶಗಳಲ್ಲಿನ ಕಾರ್ಮಿಕರು ನೆಮ್ಮದಿಯಿಂದ ಶಾಂತಿಯುತವಾದ ಜೀವನ ನಡೆಸುತ್ತಿದ್ದರು. ನಗರದಲ್ಲಿ ದರೋಡೆಯಾದಾಗ ಮುಲ್ತಾನಿಗಳು, ಸೋವಾರರು ಹಾಗೂ ಇತರ ವ್ಯಾಪಾರಿಗಳು ಈ ಮೇಲಿನ ಪ್ರದೇಶಗಳಿಗೆ ಬಂದು ನೆಲೆಸಿದ್ದುದ್ದರ ಬಗ್ಗೆ ದಾಖಲೆಗಳಲ್ಲಿ ವ್ಯಕ್ತವಾಗಿದೆ.[೬] ಈ ಪೇಟೆಗಳಲ್ಲಿ ಬಿನ್ನಿಮಿಲ್‌ನ ಕಾರ್ಮಿಕರಲ್ಲದೆ, ಮಿನರ್ವಮಿಲ್, ಮೈಸೂರು ಮಿಲ್ ಹಾಗೂ ಟಿ.ಆರ್.ಮಿಲ್‌ನ ಕಾರ್ಮಿಕರು ಬಂದು ನೆಲೆಸಿದ್ದರು. ಬೇರೆ ಬೇರೆ

ಕಾರ್ಖಾನೆಯ ಕಾರ್ಮಿಕರು ಒಂದೆಡೆ ನೆಲೆಸಿದ್ದರಿಂದ ಅವರುಗಳಲ್ಲಿ ಸರ್ವೇಸಾಮಾನ್ಯವಾಗಿ ಸಾಮಾಜಿಕ, ಆರ್ಥಿಕ ಜೀವನದಲ್ಲಿ ಸಾಮರಸ್ಯ ಬೆಳೆಯಲು ಸಾಧ್ಯವಾಯಿತು. ಈ ಹಿನ್ನೆಲೆಯಿಂದ ವೈವಾಹಿಕ ಸಂಬಂಧಗಳು ಏರ್ಪಟ್ಟವು.

೧೯೨೦ರ ನಂತರ ಕಾರ್ಖಾನೆಯು ಬಂಡವಾಳ ಹಾಗೂ ಉತ್ಪತ್ತಿಯಲ್ಲಿ ಏರಿಕೆಯನ್ನು ಕಂಡಿತು. ಇದರಿಂದ ಸಾಮಾನ್ಯವಾಗಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿಯು ಸುಧಾರಿಸಿತು ಅಂತೆಲೇ ಹೇಳಬಹುದು. ಆರ್ಥಿಕ ಪರಿಸ್ಥಿತಿ ಹೆಚ್ಚಿದಂತೆ ಹಬ್ಬ-ಹರಿದಿನ ಮಹೋತ್ಸವಗಳು, ಅವರ ಉಡುಗೆ ತೊಡುಗೆಗಳಲ್ಲಿ ಬದಲಾವಣೆಯನ್ನು ಕಂಡಿತು. ಹಬ್ಬ-ಹರಿದಿನ, ಮದುವೆ, ಸಾವು ಮುಂತಾದ ಸಂದರ್ಭಗಳಲ್ಲಿ ಕಾರ್ಮಿಕರಿಗೆ ತಮ್ಮ ಕೆಲಸದಿಂದ ಬಿಡುವಿಗಾಗಿ 'ಬಿನ್ನಿಮಿಲ್ ವೆಲ್‌ಫೇರ್ ಕಮಿಟಿ'ಯು ತಮ್ಮಲ್ಲಿಯೇ ಒಂದು ತಂತ್ರವನ್ನು ರೂಪಿಸಿ, ಮಾತುಕತೆ ನಡೆಸಿ ಮ್ಯಾನೇಜ್‌ಮೆಂಟ್‌ಗೆ ತನ್ನ ವರದಿಯನ್ನು ಸಲ್ಲಿಸಿತು.[೮]

ಆಯುಧ ಪೂಜಾ ಹಬ್ಬದ ಸಂದರ್ಭದಲ್ಲಿ ಕಾರ್ಮಿಕರು ಯಂತ್ರಗಳು ಮತ್ತು ಸಲಕರಣೆಗಳಿಗೆ ಪೂಜೆ ಮಾಡುತ್ತಿದ್ದರು. ಇದರ ಅಂಗವಾಗಿ ಕಾರ್ಮಿಕರ ಮನವಿಯ ಮೇರೆಗೆ ಆ ಒಂದು ದಿನ ಮಿಲ್ ಅನ್ನು ಮುಚ್ಚಲು ಅನುಮತಿ ನೀಡಲಾಯಿತು. ನೇಯ್ಗೆ ಕೆಲಸ ಮಾಡುವ 'ದೇವರಾಜ' ಎಂಬುವವನು ವರ್ಷಕ್ಕೆ ೧೦ ರಿಂದ ೧೧ ದಿನಗಳ ರಜೆಯನ್ನು ನೀಡಬೇಕೆಂದು ಹಾಗೂ ಧಾರ್ಮಿಕ ಸಂದರ್ಭದ ರಜೆಗಳು ಹಾಗೆಯೇ ಪ್ರತಿ ಭಾನವಾರವೂ ರಜೆಯನ್ನು ನೀಡಬೇಕೆಂದು ಮನವಿಯನ್ನು ಮಾಡಿಕೊಂಡನು.[೯] ಗಣೇಶ ಹಬ್ಬವು ೧೯೩೫ರಲ್ಲಿ ಭಾನುವಾರದಂದು ಬಿದ್ದಾಗ ಬದಲಿ ರಜೆಯನ್ನು ನೀಡಬೇಕೆಂದು ಕಾರ್ಮಿಕರು ಬೇಡಿಕೆಯನ್ನು ಮುಂದಿಟ್ಟರು. ಈ ಹೋರಾಟವು ಕಾರ್ಮಿಕರು ಬಿಡುವಿಲ್ಲದೆ ಸತತವಾಗಿ ದುಡಿಯುತ್ತಿದ್ದರ ಬಗ್ಗೆ ಹಾಗೂ ಬಿನ್ನಿಮಿಲ್‌ನಲ್ಲಿ ರಜೆಯು ಮೊದಲು ನಿಷಿದ್ಧ ಎಂಬುದನ್ನು ತೋರಿಸುತ್ತದೆ.

ಆರ್ಕಾಟ್ ಶ್ರೀನಿವಾಸಚಾರ್ಯರು ಮುನಿಸಿಪಾಲಿಟಿಯ ಅಧ್ಯಕ್ಷರಾಗಿದ್ದಾಗ (೧೯೦೧) ವಾರಕ್ಕೊಮ್ಮೆ ಮುನಿಸಿಪಲ್ ಪಾರ್ಕ್ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಓಲಗ ಊದಿಸುವ, ಬ್ಯಾಂಡ್ ಬಾಜಿಸುವ ಕಾರ್ಯಕ್ರಮ ಏರ್ಪಾಡಾಯಿತು.[೧೦] ಇಪ್ಪತ್ತನೆಯ ಶತಮಾನದ ಮೊದಲಲ್ಲಿ ಅನೇಕ ರಾಮಮಂದಿರಗಳಲ್ಲಿ ಪ್ರತಿವರ್ಷವೂ ರಾಮನವಮಿ ಸಂಗೀತೋತ್ಸವ ನಡೆಸುವ ಪರಿಪಾಠ ಶುರುವಾಯಿತು. ಬಿನ್ನಿಮಿಲ್ ಕ್ರಾಸ್ ಮುಂತಾದ ಕಡೆ ರಾಮನವಮಿ ಸಂಗೀತೋತ್ಸವಗಳು ತಪ್ಪದೆ ನಡೆದು ಸಂಗೀತ ಪ್ರೇಮಿಗಳನ್ನು ಆಕರ್ಷಿಸುತ್ತಿದ್ದವು. ಕಾರ್ಖಾನೆಯ ಮತ್ತು ಕಾರ್ಮಿಕರ ಹಿತದೃಷ್ಟಿಯಿಂದ ಬಿನ್ನಿಮಿಲ್ ಮ್ಯಾನೇಜ್‌ಮೆಂಟ್, ಕಾರ್ಖಾನೆಯ ಪರಿಸರದಿಂದ ಸಾರಾಯಿ ಮತ್ತು ಹೆಂಡದ ಅಂಗಡಿಗಳನ್ನು ಎತ್ತಂಗಡಿ ಮಾಡಿಸಿರುವ ಕಾರ್ಯಾಚರಣೆ ಗಮನಾರ್ಹವಾದುದು.

ಸರ್ ಎಂ.ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಏಳು ವರ್ಷಗಳಲ್ಲಿ (೧೯೧೨-೧೯) ಮೈಸೂರು ಮಾದರಿ ರಾಜ್ಯವಾಯಿತು. ಬೆಂಗಳೂರು ಒಂದು ಸುಂದರ ನಗರವಾಗಿ ಮಾರ್ಪಡಾಯಿತು.[೧೧] 'ಮೈಸೂರು ಬ್ಯಾಂಕ್' ಸ್ಥಾಪನೆ (೧೯೧೩)ಯಾಯಿತು. ಇದರಿಂದ ಕಾರ್ಖಾನೆಗಳು ಅಂದರೆ ಬಿನ್ನಿಮಿಲ್ ಅಲ್ಲದೆ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಇತರೆ ಕಾರ್ಖಾನೆಗಳ ಹಾಗೂ ಕಾರ್ಮಿಕರ ಹಣಕಾಸು ವ್ಯವಹಾರ ಸುಗಮವಾಗಿ ಸಾಗಲು ಸಾಧ್ಯವಾಯಿತು.

ಬಿನ್ನಿಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರಲ್ಲಿ ಪರಸ್ಪರ ಅನ್ಯೋನ್ಯತೆ ಇದ್ದಿತು ಎಂಬುದಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಕಾರ್ಖಾನೆಯಲ್ಲಿ ಅಸ್ಪೃಶ್ಯತೆ, ಜಾತೀಯತೆಯಂಥ ಕೀಳು ಪದ್ಧತಿ ಆಚರಣೆಯಲ್ಲಿದ್ದಿತು. ಅಲ್ಲದೆ ಕನ್ನಡ ಹಾಗೂ ತಮಿಳು ಕೂಲಿಕಾರ್ಮಿಕರ ನಡುವೆ ಸಂಘರ್ಷಗಳು ಆಗಿಂದಾಗ್ಗೆ ನಡೆಯುತ್ತಿದ್ದರ ಬಗ್ಗೆ ದಾಖಲೆಗಳಿವೆ. ಅಂತೆಯೇ ಕಾರ್ಮಿಕರುಗಳ ನಡುವೆ ವಿವಾದಗಳು ಸರ್ವೇ ಸಾಮಾನ್ಯ. ಬಿನ್ನಿಮಿಲ್ ಕಾರ್ಮಿಕರಲ್ಲಿನ ವಿವಾದವನ್ನು ಬಗೆಹರಿಸಲು ಬೆಂಗಳೂರು ಜಿಲ್ಲೆಯ, ಜಿಲ್ಲಾ ಮ್ಯಾಜಿಸ್ಟ್ರೇಟ್ ಕಛೇರಿಗೆ ಬರೆದ ಪತ್ರದಲ್ಲಿ (೧-೬-೧೯೨೫) ಈ ಮೇಲಿನ ಹೇಳಿಕೆಗಳು ವ್ಯಕ್ತವಾಗಿದೆ.[೧೨]

ಮೈಸೂರು ಸರ್ಕಾರ ೮(೨)ರ ಕಾಯಿದೆಯ ಅಡಿಯಲ್ಲಿ ಬಿನ್ನಿಮಿಲ್ ಡ್ರಾಮಟಿಕ್ ಸೊಸೈಟಿಗೆ ೧೯೩೩ರಲ್ಲಿ ಮನರಂಜನಾ ತೆರಿಗೆಯಲ್ಲಿ ವಿನಾಯಿತಿಯನ್ನು ನೀಡಿತು.[೧೩] ಇದರಿಂದ ಬಿನಿಮಿಲ್‌ನ ಕಾರ್ಮಿಕರು ಮತ್ತು ಅವರ ಕುಟುಂಬ ಸದಸ್ಯರು ಮನರಂಜನಾ ತೆರಿಗೆಯಿಂದ ಮುಕ್ತರಾದರು. ಅದರ ಒಂದು ಪತ್ರವ್ಯವಹಾರ ಈ ಕೆಳಗೆ ನೀಡಲಾಗಿದೆ.

**Government of Mysore**

Department of Industries and commerce Office of the Director.

Dated, Bangalore 23rd August 1933.

**From**

A.V. Ramanathan, Esq., B.A.

Director of Industries and Commerce in Mysore.

Bangalore, (India)

**To**

Abdul Wajid Esq., B.A.,

Secretary to the Govt. of Mysore.

Development Department

Bangalore.

Sir,

I have the honor to state that Messrs. The Bangalore Woolen, Cotton, and Silk Mills Co. Ltd., Bangalore city, have represented to me that entertainment given by the mills Dramatic Society be Exempted from the operation of the provisions of the entertainments Tax Regulation (No. VIII of 1932) Section 8 (2), copy of their representation dated 1-8-1933 is sent herewith for your reference. The Mills' Dramatic society exists for the promotion of industrial welfare and not for earning profits. The performances are purely of a private characted for the benefit of the work people and their families wit a nominal charge for admission, in view of the circumstances mentioned, I request that Govt. may kindly exempt the Mills' Dramatic Society from liability to pay the entertainment tax as provided for under section 8(2) of the Regulation. Early orders of Govt. may be kindly obtained and communicated to me.

I have the honor to be,

Sir

Your most obedient servant

Director.

೧೯೨೦ರ ನಂತರ ಬೆಂಗಳೂರು ಎಲ್ಲಾ ವಿಧಗಳಲ್ಲಿ ಅಭಿವೃದ್ಧಿಯತ್ತ ದಾಪುಗಾಲು ಹಾಕಲು ಪ್ರಯತ್ನಿಸಿತು. ಅದಕ್ಕೆ ಬಿನ್ನಿಮಿಲ್ ಮತ್ತು ಇತರ ಕಾರ್ಖಾನೆಗಳಷ್ಟೇ ಕಾರಣವಾಗಿರದೆ ಎಲ್ಲಾ ರಂಗಗಳು ಇದಕ್ಕೆ ಕೈ ಜೋಡಿಸಿದ್ದವು. ಅದು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತಾವುದೇ ಕ್ಷೇತ್ರವಾಗಿರಬಹುದು. ಎಲ್ಲವೂ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದವು. ಇಂತಹ ಸಂದರ್ಭದಲ್ಲಿ ಸೆಪ್ಟೆಂಬರ್ ೭, ೧೯೨೭ರಂದು ಬೆಂಗಳೂರು ನಗರದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಅಧಿಕಾರಾವಧಿಯ ಬೆಳ್ಳಿ ಮಹೋತ್ಸವ ಆಚರಣೆಯನ್ನು ಏರ್ಪಡಿಸಲಾಗಿತ್ತು.[೧೯] ಆಗ ಒಡೆಯರು ಬೆಂಗಳೂರು ನಗರದ ಮುನ್ಸಿಪಲ್ ಕಮಿಷನರ್‌ಗಳನ್ನು ಉದ್ದೇಶಿಸಿ ಮಾಡಿದ ಭಾಷಣ ಈ ರೀತಿ ಇದೆ.

REPLY TO ADDRESS BY THE MUNICIPAL COMMISSIONERS OF THE CITY OF BANGALORE, ON THE OCCASION OF THE CELEBRATION OF THE SILVER JUBILEE IN BANGALORE CITY.

7th September, 1927

Gentlemen of the Bangalore Municipal council, It gives me very great pleasure, at the close of a quarter of a century of my rule to make this progress through your city and to receive so cordial a welcome from its inhabitants.

You have aptly reminded me in your address that period, long as it seems, makes up but half the life of your body, to which is entrusted the government and development of the city. In your long life, you have seen it stretch its bounds till Kempe Gowda's prophecy is more than fulfilled ; you have watched the growth of great public buildings, educational institutions and industrial undertaking ; and you have struggled to provide water-supply, drainage, and other amenities.

Your address show that, even in half a century, your work is little more than begun. You still need more water, a better scheme of drainage, removal of congestion, housing of the poor, development of primary education and better communications.

You hope to achieve this with the help of the Government and by working together in the spirit of brotherhood which, as you very rightly recognise, is the index of character and the real basis of Nationhood. There is, to my mind, nothing more conducive to the true and lasting progress of a country than a widespread feeling of good-will and common interest all concerned in the activities of life.

So far as the Government is concerned you acknowledge in generous terms the assistance which you have always received in the past. And for the future, your may rest assured that my Government will stand by you so long as

you continue to work zealously and efficiently for the good of your city and its inhabitants. I need not assure you of my own deep interest in the city of Bangalore and in all that concerns its welfare. I shall watch with pleasure and sympathy the various improvements which you are carrying out to enhance its beauty and healthfullness, and I hope that your efforts will meet with the fullest measure of success. Let me, at the same time impress upon you the extreme importance of paying a due share of your attention to the less a favoured parts of the city and of doing all that lies in your power to brighten the lives and surroundings of the poorer classes, so they, too, may enjoy the benefits of a healthy and enlightened life.

I will not detain you longer, except to tell you that it has been a great pleasure to me to receive your loyal and dutiful address, to express my gratitude for the warmth of the reception accorded to me, and to bid you go on in the path of civic progress which you have marked out for yourselves.

### ೩.೩. ಮಿಲ್‌ನ ಉಚ್ಛ್ರಾಯ ಕಾಲ

೧೮೮೪ರಲ್ಲಿ ಸ್ಥಾಪನೆಗೊಂಡ ಬಿನ್ನಿಮಿಲ್ ೧೯೯೮ರಲ್ಲಿ ಕೊನೆಗೊಂಡಿದ್ದು, ೧೧೪ ವರ್ಷಗಳ ಇತಿಹಾಸವನ್ನು ಹೊಂದಿದೆ.[೧೫] ಇದು ಸ್ಥಾಪನೆಯಾದಾಗಿನಿಂದ ತೀವ್ರಗತಿಯಲ್ಲಿಯೇ ಅಭಿವೃದ್ಧಿ ಪತದತ್ತ ಸಾಗಿತು. ಆದರೆ ೧೮೯೮ರಲ್ಲಿ ಬೆಂಗಳೂರಿನಲ್ಲಿ ಕಾಣಿಸಿಕೊಂಡ ಮಹಾ ಪ್ಲೇಗ್ ಅಪಾರ ಸಾವು–ನೋವು ಹಾಗೂ ಜನರನ್ನು ಹಲವು ಸಂಕಷ್ಟಗಳಿಗೆ ಗುರಿಮಾಡಿತು. ನಗರದಲ್ಲಿರುವ ಎರಡು ಉಗಿಚಾಲಿತ ಕಾರ್ಖಾನೆ (ಬಟ್ಟೆ ಗಿರಣಿ)ಗಳು ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡಲಾಗದೆ ನಷ್ಟಕ್ಕೊಳಗಾಗಿ ಷೇರುದಾರರಿಗೆ ಆ ವರ್ಷ ಡಿವಿಡೆಂಡ್ ನೀಡಲಾರದಾದವು.[೧೬] ಅಂದರೆ ಈ ಮಹಾಪ್ಲೇಗ್‌ನ ದುಷ್ಪರಿಣಾಮದಿಂದ ಬಿನ್ನಿಮಿಲ್ ಸಹ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ನಷ್ಟವನ್ನು ಅನುಭವಿಸಿತು. ಇಲ್ಲಿ ಈ ಹೇಳಿಕೆಯನ್ನು ವಿವರಿಸುವ ಉದ್ದೇಶ, ಆ ಸಂದರ್ಭದಲ್ಲಿ ಮಾತ್ರ ಬಿನ್ನಿಮಿಲ್ ಪ್ರಾರಂಭದ ನಿಧಾನಗತಿಯನ್ನು ಕಾಯ್ದುಕೊಂಡಿತು. ಮಿಕ್ಕೆಲ್ಲಾ ಸಂದರ್ಭಗಳಲ್ಲಿ ಅಂದರೆ ಭಾರಿ ಗಾತ್ರದ ಕೈಗಾರಿಕೆಗಳು ಪ್ರಾರಂಭವಾಗುವವರೆಗೆ (ಆ ಕಾಲಕ್ಕೆ ಕರ್ನಾಟಕದಲ್ಲಿ ಬಿನ್ನಿಮಿಲ್ ಕಾರ್ಖಾನೆಯೇ ಅತಿ ದೊಡ್ಡ ಕೈಗಾರಿಕೆಯಾಗಿದ್ದಿತು) ಈ ಕಾರ್ಖಾನೆ ಯಾವುದೇ ನಷ್ಟಕ್ಕೆ ಒಳಗಾಗಿರಲಿಲ್ಲ.

ಈ ಮಿಲ್ ಮೊದಲನೇ ಮಹಾಯುದ್ಧ ಪ್ರಾರಂಭವಾದಾಗಿನಿಂದ (೧೯೧೪) ಎರಡನೇ ಮಹಾಯುದ್ಧ ಮುಗಿಯುವವರೆಗೂ (೧೯೪೫) ತನ್ನ ಉಚ್ಛ್ರಾಯ ಸ್ಥಿತಿಯನ್ನು ಹೊಂದಿತ್ತು. ಬಿನ್ನಿಮಿಲ್‌ನಲ್ಲಿ ಸುಮಾರು ೬೫೦೦ (ಆರು ಸಾವಿರದ ಐದನೂರು) ಮಂದಿ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದರು. ಒಂದನೆಯ ಮಹಾಯುದ್ಧದಲ್ಲಿ ಈ ಕಾರ್ಖಾನೆ ಚೆನ್ನಾಗಿ ಪ್ರಗತಿ ಸಾಧಿಸಿತು. ೧೯೨೧ರಲ್ಲಿ ಬಿನ್ನಿಮಿಲ್ ಪಾಲು ಬಂಡವಾಳ ೨೬.೨೫ ಲಕ್ಷ ರೂ. ಇದ್ದು, ಕಾರ್ಮಿಕ ಸಂಖ್ಯೆ ೩೦೩೭ ಆಗಿದ್ದಿತು.[೧೭] ಮೊದಲು ಮತ್ತು ಎರಡನೇ ಮಹಾಯುದ್ಧದಲ್ಲಿ ಯೂರೋಪನಲ್ಲಿ ಇಂಗ್ಲೆಂಡ್ ಪ್ರಮುಖ ಸ್ಥಾನ ಹೊಂದಿದ್ದರಿಂದ ಅದು ತನ್ನ ಸೈನಿಕರಿಗೆ ಬಟ್ಟೆಗಳನ್ನು ಪೂರೈಕೆ ಮಾಡಬೇಕಾಗಿದ್ದಿತು. ಹೀಗಾಗಿ ಇದು ತನ್ನ ವಸಾಹತು ರಾಷ್ಟ್ರಗಳ ಮೇಲೆ ಅವಲಂಬನೆಯಾಗಬೇಕಾಗಿ ಬಂದಿತು. ಆ ಸಂದರ್ಭದಲ್ಲಿ ಹತ್ತಿ ಬಟ್ಟೆಗಳಿಗೆ ಬೇಡಿಕೆ ಹೆಚ್ಚಾಗಿ ಅಧಿಕ ಉತ್ಪಾದನೆಯನ್ನು ಕಂಡಿತು. ಎರಡನೇ ಮಹಾಯುದ್ಧದ ಸಮಯದಲ್ಲಿ ಮೈಸೂರು ರಾಜ್ಯವೊಂದೇ ರಾಷ್ಟ್ರದ ಶೇಕಡಾ ಐವತ್ತರಷ್ಟು (೫೦%) ರೇಷ್ಮೆ ತಯಾರಿಸುತ್ತಿತ್ತು.[೧೮] ಹೀಗಾಗಿ ಬಿನ್ನಿಮಿಲ್ ಕಾರ್ಖಾನೆಯ ಉತ್ಪಾದನಾ ವಸ್ತುಗಳಿಗೂ ಬೇಡಿಕೆ ಹೆಚ್ಚಾಯಿತು. ೧೯೩೧ರಲ್ಲಿ ಬಿನ್ನಿಮಿಲ್‌ನಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರ ಸಂಖ್ಯೆ ೪,೩೦೦ ಆಗಿದ್ದಿತು.[೧೯]

ಕಾರ್ಖಾನೆಯಲ್ಲಿ ಮಹಿಳಾ ಮತ್ತು ಪುರುಷ ಕಾರ್ಮಿಕರು ಇದ್ದು ದಿನದಲ್ಲಿ ಮೂರು ಬಾರಿ ಕ್ರಮಾನುಸಾರವಾಗಿ ಕಾರ್ಯ ನಿರ್ವಹಿಸುತ್ತಿದ್ದರು. ನಿಗದಿಪಡಿಸಿದ ಸಮಯದಂತೆ ಬೆಳಗ್ಗೆ ೭.೦೦ ಗಂಟೆಯಿಂದ ಮಧ್ಯಾಹ್ನ ೩.೦೦ ಗಂಟೆಯವರೆಗೆ, ಮತ್ತೆ ಮಧ್ಯಾಹ್ನ ೩.೦೦ ಗಂಟೆಯಿಂದ ರಾತ್ರಿ ೧೧.೦೦ ಗಂಟೆಯವರೆಗೆ, ರಾತ್ರಿ ೧೧.೦೦ ಗಂಟೆಯಿಂದ ಬೆಳಗ್ಗೆ ೭.೦೦ ಗಂಟೆಯವರೆಗೆ. ಈ ರೀತಿಯಾಗಿ ಕಾರ್ಮಿಕರು ವಿವಿಧ ವಿಭಾಗಗಳಲ್ಲಿ ಅಂದರೆ ವೈಡಿಂಗ್, ರಂಗ್‌ಖಾತ್, ರಿಂಗ್‌ಫ್ರೇಮ್, ಕಫಡ್‌ಖಾತ್, ಇಂಜಿನಿಯರಿಂಗ್ ವಿಭಾಗ ಇನ್ನಿತರ ವಿಭಾಗಗಳಲ್ಲಿ ಪುರುಷ ಮತ್ತು ಮಹಿಳಾ ಕಾರ್ಮಿಕರು ಕೆಲಸವನ್ನು ಮಾಡುತ್ತಿದ್ದರು. ಪುರುಷ ಕಾರ್ಮಿಕರು ಮೂರು ಶಿಫ್ಟ್‌ಗಳಲ್ಲಿ (ಪಾಳಿಯಂತೆ) ಕೆಲಸ ಮಾಡುತ್ತಿದ್ದರು. ಆದರೆ ಮಹಿಳಾ ಕಾರ್ಮಿಕರು ಕೇವಲ ಒಂದೇ ಒಂದು ಶಿಫ್ಟ್‌ನಲ್ಲಿ ಅಂದರೆ ಬೆಳಗ್ಗೆ ೬.೦೦ ಗಂಟೆಯಿಂ ಸಂಜೆ ೫.೦೦ ಗಂಟೆಯವರೆಗೆ ಕೆಲಸ ಮಾಡುತ್ತಿದ್ದರು.

ಮಿಲ್‌ನ ಕಾರ್ಮಿಕರು ಸಮಸ್ಯೆಗಳನ್ನು ಹೊಂದಿದ್ದರೂ ಸಹ ಉತ್ತಮ ಮಟ್ಟದ ಜೀವನವನ್ನು ಸಾಗಿಸುತ್ತಿದ್ದರು. ಎರಡು ಮಹಾಯುದ್ಧಗಳ ನಡುವೆ ಬೇಡಿಕೆ ಮತ್ತು ಪೂರೈಕೆಯಲ್ಲಿ ಏರಿಕೆಯನ್ನು ಕಂಡಿದ್ದರಿಂದ ಕಾರ್ಮಿಕರು ಹೆಚ್ಚಿನ ಸಂಬಳ ಹಾಗೂ ಬೋನಸ್ ಅನ್ನು ಪಡೆಯುತ್ತಿದ್ದರು. ಬಿನ್ನಿಮಿಲ್‌ನಲ್ಲಿ ಬೋನಸ್ ನೀಡಿಕೆಯ ವಿಷಯದಲ್ಲಿ ೧೯೨೬, ೧೯೩೦, ೧೯೩೧, ೧೯೪೦ ಮತ್ತು ೧೯೪೧ನೆಯ ವರ್ಷಗಳಲ್ಲಿ ಮುಷ್ಕರಗಳು ನಡೆದಿರುವುದನ್ನು ಕಾಣಬಹುದು.[೨೦] ಅದೇ

ರೀತಿಯಾಗಿ ಆರೋಗ್ಯ, ವಸತಿ, ಶಿಕ್ಷಣ ಹಲವಾರು ರೀತಿಯ ಸೌಲಭ್ಯಗಳನ್ನು ಕಾರ್ಮಿಕರು ಪಡೆದುಕೊಳ್ಳುತ್ತಿದ್ದರು.

೧೯೪೦ರ ಸಂದರ್ಭದಲ್ಲಿ ಕೈಗಾರಿಕೆಗಳ ಬೆಳವಣಿಗೆ ಗಣನೀಯ ಪ್ರಮಾಣದಲ್ಲಿ ಪ್ರಾರಂಭವಾಯಿತು. ಮೈಸೂರು ಸರ್ಕಾರ ಮೊದಲಿಗಿಂತ ಹೆಚ್ಚು ಬಂಡವಾಳವನ್ನು ಹೂಡಲು ಮುಂದಾಯಿತು. ಇದರ ಪರಿಣಾಮವಾಗಿ ಸರ್ಕಾರ ಸಾಬೂನು ಕಾರ್ಖಾನೆ, ಸರ್ಕಾರಿ ಪಿಂಗಾಣಿ ಕಾರ್ಖಾನೆ ಇತ್ಯಾದಿ ಈ ಸಂದರ್ಭದಲ್ಲಿ ಪ್ರಾರಂಭವಾಗಿ ಮೈಸೂರಿನ ವಿದ್ಯಾವಂತ ಜನರಿಗೆ ಉದ್ಯೋಗವನ್ನು ಒದಗಿಸಿದವು. ಈ ಸಮಯದಲ್ಲಿಯೇ ಇಂಡಿಯನ್ ಮಾನ್ಯುಫ್ಯಾಕ್ಚರರ್ಸ್ ಆರ್ಗನೈಜೇಷನ್‌ನ ಅಧ್ಯಕ್ಷರಾದ ಸರ್. ಎಂ.ವಿಶ್ವೇಶ್ವರಯ್ಯನವರು 'ಕೈಗಾರಿಕೀಕರಣ ಇಲ್ಲವೇ ನಾಶ' ಎಂಬ ಕರೆಯನ್ನು ಕೊಟ್ಟರು.[೨೨] ಹಾಗಾಗಿ ೧೯೪೦ರಲ್ಲಿ ಹಿಂದೂಸ್ತಾನ ಏರೋನಾಟಿಕ್ಸ್ ಲಿಮಿಟೆಡ್, ಐಟಿಐ ೧೯೪೮ರಲ್ಲಿ, ೧೯೫೩ರಲ್ಲಿ ಹೆಚ್.ಎಂ.ಟಿ. ಹಾಗೂ ೧೯೫೬ರಲ್ಲಿ ಬಿ.ಇ.ಎಲ್. ಸ್ಥಾಪನೆಯಾದವು. ಈ ಕೈಗಾರಿಕೆಗಳು ಬೆಂಗಳೂರಿನ ಪರಿಧಿಯ ಮೇಲೆ ಸ್ವ-ಪಟ್ಟಣಗಳನ್ನು ಹೊಂದಿದವು. ಈ ಮೇಲಿನ ಸಂದರ್ಭಗಳು ಹಾಗೂ ಬೆಳವಣಿಗೆಗಳು ಬಿನ್ನಿಮಿಲ್ ಕಾರ್ಖಾನೆಯ ಮೇಲೂ ಅನುಕೂಲ ಮತ್ತು ಪ್ರತಿಕೂಲ ಪರಿಣಾಮ ಬೀರಿತು ಎಂದರೆ ತಪ್ಪಾಗಲಾರದು.

ಲೇಖಕ ಎಸ್.ಎಲ್.ಭೈರಪ್ಪನವರು ತಮ್ಮ ಆತ್ಮ-ವೃತ್ತಾಂತವಾದ 'ಭಿತ್ತಿ' ಯಲ್ಲಿ ಒಂದೆರಡು ಸಂದರ್ಭಗಳನ್ನು ಈ ರೀತಿಯಾಗಿ ವಿವರಿಸಿದ್ದಾರೆ. ಶಿವಪ್ಪನವರು ತುಂಬಾ ಅದ್ದೂರಿ ವ್ಯವಹಾರದ ವ್ಯಕ್ತಿ. ಗ್ರೀನ್ ರ‍್ಯಾಲಿ ಸೈಕಲ್, ಉಲನ್ ಪ್ಯಾಂಟು, ಬಿನ್ನಿ ಶರಟು, ಒಂದೊಂದು ದಿನ ಖಾದಿ ಜುಬ್ಬ ಪೈಜಾಮು,[೨೩] ಹಾಗೆಯೇ ಇನ್ನೊಂದು ಕಡೆ ಕೃಷ್ಣೆಗೌಡರು ನನ್ನ ಹರಿದ ಬಟ್ಟೆ ನೋಡಿ ಮೂರು ರೂಪಾಯಿಗೆ ಎರಡು ಬಿನ್ನಿ ಚಡ್ಡಿ ಮತ್ತು ಎರಡು ಬಿನ್ನಿ ಅಂಗಿಯನ್ನು ಹೊಲಸಿಕೊಟ್ಟರು ಎಂದು ತಿಳಿಸಿದ್ದಾರೆ.[೨೪] ಅಂತೆಯೇ ಮೈಸೂರಿಗೆ ಹೋದಾಗ ಅಲ್ಲಿ ಬಿನ್ನಿ ಶರ್ಟು ಮತ್ತು ಬಿನ್ನಿ ಪ್ಯಾಂಟನ್ನು ಕೊಂಡಿದ್ದಾಗಿ ತಿಳಿಸಿದ್ದಾರೆ.[೨೫] ಭೈರಪ್ಪನವರ ಜನ್ಮ ದಿನಾಂಕ ೨೬-೭-೧೯೩೪ ಆಗಿದ್ದು, ಈ ಮೇಲಿನ ಸಂದರ್ಭಗಳು ೧೯೪೦ರಿಂದ ೧೯೫೦ರದ್ದು. ಇದು ಬಿನ್ನಿಮಿಲ್‌ನ ಉಚ್ಛ್ರಾಯ ಸ್ಥಿತಿಯನ್ನು ಸೂಚಿಸುತ್ತಿದ್ದು, ಈ ಕಾರ್ಖಾನೆಯಿಂದ ಉತ್ಪಾದನೆಯಾದ ಉಡುಪುಗಳು ಹೆಚ್ಚಿನ ಬೆಲೆಯನ್ನು ಹೊಂದಿದ್ದು, ಮೇಲ್ಮಟ್ಟದ ಸಂಕೇತವನ್ನು ಸೂಚಿಸುತ್ತಿತ್ತು.

ಹೀಗೆ ಬಿನ್ನಿಮಿಲ್ ೧೯೧೦ರ ದಶಕದಿಂದ ೧೯೫೦ರ ದಶಕದವರೆಗೂ ತನ್ನ ಉಚ್ಛ್ರಾಯ ಸ್ಥಿತಿಯನ್ನು ಕಾಯ್ದುಕೊಂಡು ಬಂದಿತ್ತು.

### ೩.೪. ದೇಶ-ವಿದೇಶ ಸಂಬಂಧ

ಅತ್ಯಂತ ಜನಪ್ರಿಯತೆಯನ್ನು ಪಡೆದ ಬಿನ್ನಿಮಿಲ್ ದೇಶ-ವಿದೇಶಗಳಲ್ಲಿ ತನ್ನ ಪ್ರಭಾವವನ್ನು

ಬೀರಿತ್ತು. ಬಿನ್ನಿ ಮತ್ತು ಕಂಪನಿಯು ಕೇವಲ ಬೆಂಗಳೂರಿನಲ್ಲಿ ಮಾತ್ರ ಕಾರ್ಖಾನೆಯನ್ನು ಹೊಂದಿರದೆ ಭಾರತದಾದ್ಯಂತ ತನ್ನ ಘಟಕಗಳನ್ನು ಹೊಂದಿತ್ತು. ಅದು ಪ್ರಮುಖವಾಗಿ ಮದ್ರಾಸು, ಹೈದರಾಬಾದ್, ಬಾಂಬೆ, ಕಲ್ಕತ್ತಾ, ಇತ್ಯಾದಿ ಕಡೆಗಳಲ್ಲಿ ತನ್ನ ಘಟಕಗಳನ್ನು ಹೊಂದಿತ್ತು. ಹೀಗಾಗಿ ಬೆಂಗಳೂರಿನ ಬಿನ್ನಿಮಿಲ್ ಕಾರ್ಖಾನೆಯು ದೇಶದ ಇತರ ಬಿನ್ನಿಮಿಲ್ ಕಾರ್ಖಾನೆಗಳೊಂದಿಗೆ ಸಂಬಂಧ ಹೊಂದಿರುವುದು ಸಾಮಾನ್ಯದ ಸಂಗತಿ. ಆದರೆ ಬೆಂಗಳೂರಿನ ಈ ಕಾರ್ಖಾನೆಯು ದೇಶದ ಇತರ ಬಿನ್ನಿ ಕಾರ್ಖಾನೆಗಳಿಗೆ ಹೋಲಿಸಿಕೊಂಡರೆ ಅಗ್ರಗಣ್ಯ ಸಾಲಿನಲ್ಲಿ ನಿಲ್ಲುತ್ತದೆ. ಏಕೆಂದರೆ ಉತ್ಪಾದನಾ ವಹಿವಾಟು ಆ ಮಟ್ಟದಲ್ಲಿತ್ತು. ಬೆಂಗಳೂರಿನಿಂದ ಉತ್ಪಾದನೆಯಾದ ವಸ್ತುಗಳು ಮೈಸೂರು ಸಂಸ್ಥಾನದ ನಾನಾ ಭಾಗಗಳಿಗೆ ರಫ್ತಾಗುತ್ತಿತ್ತು. ಹಳ್ಳಿಯ ಜನರಿಂದ ಹಿಡಿದು ನಗರ-ಪಟ್ಟಣಗಳ ಜನರವರೆಗೂ ಇದು ಗುಣಮಟ್ಟದಲ್ಲಿ ಮನೆ ಮಾತಾಗಿತ್ತು.

ಮದ್ರಾಸ್ ಬಿನ್ನಿ ಮತ್ತು ಕಂಪನಿಯು ಮೈಸೂರು ಸರ್ಕಾರದಿಂದ ಬೆಂಗಳೂರು ಸ್ಟೋರ್ ಪರ್ಚೇಸ್ ಕಮಿಟಿಯ ಮೂಲಕ ಸರಕುಗಳನ್ನು ಕೊಂಡಿದ್ದಕ್ಕಾಗಿ ಹಾಗೂ ಆಮದು ಮಾಡಿದ್ದಕ್ಕಾಗಿ ಕ್ಲೀನಿಂಗ್ ಏಜೆಂಟ್ ರೂಪದಲ್ಲಿ ೧೪೦೩೮/೯/- ರೂ.ಗಳನ್ನು ಸ್ವೀಕರಿಸಿತು.[೨೫] ಇದಕ್ಕಾಗಿ ೫೦೦೦ ರೂ.ಗಳ ಮುಂಗಡವನ್ನು ಪಡೆದುಕೊಂಡಿತು. ಬಾಕಿ ಹಣವನ್ನು ವಿವಿಧ ಕಂತುಗಳ ರೂಪದಲ್ಲಿ ಮೈಸೂರು ಸರ್ಕಾರ ಮದ್ರಾಸ್ ಬಿನ್ನಿ ಮತ್ತು ಕಂಪನಿಗೆ ನೀಡಿತು. ಈ ವ್ಯವಹಾರದ ಆಜ್ಞೆ ಹೊರಡಿಸಿದ್ದು ೨೭ ಮಾರ್ಚ್ ೧೯೨೫ರಲ್ಲಿ, ಹಾಗೂ ಇದರ ರಸೀದಿಯನ್ನು ಸ್ವೀಕರಿಸಿದ್ದು ೩ ಏಪ್ರಿಲ್ ೧೯೨೫ರಲ್ಲಿ. ಅದರ ವಿವರಗಳ ಪಟ್ಟಿ ಈ ಕೆಳಕಂಡಂತಿದೆ.

**ಸ್ಟೇಟ್‌ಮೆಂಟ್ ಆಫ್ ಬಿಲ್ ಪೆಂಡಿಂಗ್ ಅಡ್ಜೆಸ್ಟ್‌ಮೆಂಟ್**

| ಇನ್‌ಡೆಂಟ್ ನಂಬರ್ | ಬಿಲ್‌ನಂಬರ್ ನಂಬರ್ | ಡೇಟ್ | ಅಮೌಂಟ್ | ಸ್ಟೇಜ್ |
|---|---|---|---|---|
| ೨೧ | ೨೯೪೫ | ೯-೮-೧೯೨೪ | ೧೨೫-೭-೦ | ಪೆಂಡಿಂಗ್ ವಿತ್ ಸೂಪರಿನ್ ಟೆಂಡೆಂಟ್ ಆಫ್ ಸೆರಿಕಲ್ಚರ್ |
| ೨೨ | ೩೩೧೭ | ೯-೧೨-೨೪ | ೩೬೬-೯-೦ | ಪಾಸ್ಡು ಆನ್ ಟು ದ ಕಂಟ್ರೋಲರ್ ಫಾರ್ ಇಶ್ಯೂಯಿಂಗ್ ಚೆಕ್. |
| ೫೫ | ೩೫೫೦ B. | ೧೯-೩-೨೫ | ೯೮-೩-೦ | ಪಾಸ್ಡು ಆನ್ ಟು ದ ಎಕ್ಸಿಕ್ಯೂಟಿವ್ ಇಂಜನಿಯರ್, ಡ್ಯಾಂ ಕನ್‌ಸ್ಟ್ರಕ್ಷನ್ ಡಿವಿಷನ್. |

| | | | | |
|---|---|---|---|---|
| ೯೦ | ೩೬೨೬ | ೧೯-೩-೨೫ | ೩೩-೩-೦ | ಪಾಸ್ಡು ಆನ್ ಟು ದ ಐ.ಜಿ. ಆಫ್ ಎಜುಕೇಶನ್. |
| ೫೫ | ೩೫೬೯ B. | ೨೩-೩-೨೫ | ೮-೧೪-೦ | ಪಾಸ್ಡು ಆನ್ ಟು ದ ಎಕ್ಸಿಕ್ಯೂಟಿವ್ ಇಂಜನಿಯರ್, ಡ್ಯಾಂ ಕನ್‌ಸ್ಟ್ರಕ್ಷನ್ ಡಿವಿಷನ್. |
| ೫೫. | ೩೬೨೫ | ೨೭-೩-೨೫ | ೭೯೨೨-೨-೦ | ಪಾಸ್ಡು ಆನ್ ಟು ದ ಎಕ್ಸಿಕ್ಯೂಟಿವ್ ಇಂಜನಿಯರ್, ಡ್ಯಾಂ ಕನ್‌ಸ್ಟ್ರಕ್ಷನ್ ಡಿವಿಷನ್. |
| ೫೨ | ೩೬೭೪ | ೨೭-೩-೨೫ | ೧೭-೧-೦ | ರಿಟರ್ನ್ಡ್ ಟು ಬಿನ್ನಿ & ಕಂ. ಫಾರ್ ಫರ್ನಿಷಿಂಗ್ ದ ಕ್ಲೈಂ ಇನ್ ಟು (೨) ಸಪರೇಟ್ ಬಿಲ್ಸ್. |
| ೯೪ | ೩೬೭೫ | ೨೭-೩-೨೫ | ೯೧-೧೨-೦ | ಪಾಸ್ಡು ಆನ್ ಟು ದ ಡೈರಕ್ಟರ್ ಆಫ್ ಸ್ಯಾಂಡಲ್‌ವುಡ್ ಆಯಿಲ್ ಫ್ಯಾಕ್ಟರಿ. |
| ೮೦ | ೩೬೭೬ | ೨೭-೩-೨೫ | ೧೦೩-೬-೦ | ಪೆಂಡಿಂಗ್ ಇನ್ ದಿಸ್ ಆಫೀಸ್ ಫಾರ್ ವಾಂಟ್ ಆಫ್ ಫರ್ದರ್ ಇನ್‌ಫಾರ್ಮೇಶನ್ ಕಾಲ್ಡ್ ಫಾರ್‌ಫ್ರಂ ಬಿನ್ನಿ & ಕಂ. |
| ೭೫. | ೩೬೭೭ | ೨೭-೩-೨೫ | ೨೭೮-೮-೦ | ಪಾಸ್ಡು ಆನ್ ಟು ದ ಡೈರಕ್ಟರ್ ಆಫ್ ಅಗ್ರಿಕಲ್ಚರ್. |
| ೯೧. | ೩೬೭೮ | ೨೭-೩-೨೫ | ೮೪-೧೪-೦ | ಪಾಸ್ಡು ಆನ್ ಟು ದ ಡೈರಕ್ಟರ್ ಆಫ್ ಅಗ್ರಿಕಲ್ಚರ್. |
| ೬೭. | ೩೫೨೦ B. | ೩೦-೩-೨೫ | ೧-೧೨-೦ | ಪಾಸ್ಡು ಆನ್ ಟು ದ ಸೂಪರಿನ್ ಟೆಂಡೆಂಟ್ ಗೌವರ್ನ್‌ಮೆಂಟ್ ಸ್ಟೇಷನರಿ. |
| ೮೫. | ೩೬೦೨ | ೨-೪-೨೫ | ೭-೪-೦ | ಪಾಸ್ಡು ಆನ್ ಟು ದ ಚೀಫ್ ಇಂಜಿನಿಯರ್. |

| | | | | |
|---|---|---|---|---|
| ೫೫. | ೩೬೭೫. B | ೭-೪-೭೫ | ೧೩೪-೪-೦ | ಪಾಸ್ಡು ಆನ್ ಟು ದ ಎಕ್ಸಿಕ್ಯೂಟಿವ್ ಇಂಜನಿಯರ್ ಡ್ಯಾಂ ಕನ್‌ಸ್ಟ್ರಕ್ಷನ್ ಡಿವಿಷನ್. |

ಒಟ್ಟು ೯೭೬೩-೩-೦ ರೂ.ಗಳು

ಸೆಕ್ರೇಟರಿ

ಸ್ಟೋರ್ ಪರ್ಚೇಸ್ ಕಮಿಟಿ

ಎರಡನೇ ಮಹಾಯುದ್ಧದ ಕಾಲದಲ್ಲಿ ಸೇನೆಗೆ ಬಿನ್ನಿಮಿಲ್‌ನ ಬಟ್ಟೆ ಅಪಾರವಾಗಿ ಪೂರೈಕೆಯಾಯಿತು.[೨೨] ಉತ್ಪಾದನೆಯಾದ ಬಟ್ಟೆಗಳು ಸಾಮಾನ್ಯವಾಗಿ ಯುರೋಪಿನ ರಾಷ್ಟ್ರಗಳು ಪ್ರಮುಖವಾಗಿ ಬ್ರಿಟನ್, ಜಪಾನ್, ರಷ್ಯಾ ಇತ್ಯಾದಿ ರಾಷ್ಟ್ರಗಳಿಗೆ ಯುದ್ಧ ನಡೆದ ಸಂದರ್ಭದಲ್ಲಿ ಹೆಚ್ಚಾಗಿ ರಫ್ತಾಗುತ್ತಿದ್ದವು. ಅತ್ಯಂತ ಜನಮನ್ನಣೆ ಪಡೆದ ಈ ಮಿಲ್‌ನ ಬಟ್ಟೆಗಳನ್ನು ಕೆ.ಎಸ್.ಆರ್.ಟಿ.ಸಿ. ಸಂಸ್ಥೆಗಳು ಹಾಗೂ ಮಿಲಿಟರಿ ಪಡೆಗಳು ತಮ್ಮ ಸಮವಸ್ತ್ರಗಳಿಗಾಗಿ ಬೇಡಿಕೆಯನ್ನು ಮುಂದಿಟ್ಟು, ಈ ಮಿಲ್‌ನಿಂದ ಉತ್ತಮ ಗುಣಮಟ್ಟದ ಬಟ್ಟೆಯನ್ನು ಪಡೆಯುತ್ತಿದ್ದವು.

### ೩.೫. ಬೆಂಗಳೂರು ನಗರಾಭಿವೃದ್ಧಿಗೆ ಮಿಲ್‌ನ ಪಾತ್ರ

ವಿಶ್ವದ ಚರಿತ್ರೆಯಲ್ಲಿ ನಗರ ಹಾಗೂ ಪೇಟೆಗಳ ನಿರ್ಮಾಣದ ಹಿಂದೆ ವೃತ್ತಿ, ಜಾತಿ ಹಾಗೂ ವ್ಯಕ್ತಿಯ ಪ್ರಭಾವ ಇದ್ದೇ ಇರುತ್ತದೆ. ಅದೇ ರೀತಿ ಬೆಂಗಳೂರಿನಲ್ಲಿ ನಿರ್ಮಾಣವಾದ ಪೇಟೆಗಳು ಹಾಗೂ ನಗರಗಳೂ ಇದಕ್ಕೆ ಹೊರತಾಗಿಲ್ಲ. ವೃತ್ತಿಯ ಹಿನ್ನೆಲೆಯಿಂದ ನಿರ್ಮಾಣವಾದ ಪೇಟೆಗಳೆಂದರೆ ಅರಳೇ ಪೇಟೆ, ಅಕ್ಕಿಪೇಟೆ, ಕುಂಬಾರ ಪೇಟೆ, ರಾಗಿ ಪೇಟೆ, ಗಾಣಿಗರ ಪೇಟೆ, ಗೊಲ್ಲರ ಪೇಟೆ, ಮಡಿವಾಳ ಪೇಟೆ, ಹೂವಾಡಿಗರ ಪೇಟೆ, ಮಂಡಿ ಪೇಟೆ, ಅಂಚೆ ಪೇಟೆ, ಬಳೇ ಪೇಟೆ, ಹಳೆ ತರಗು ಪೇಟೆ, ಹೊಸ ತರಗುಪೇಟೆ, ಸುಣಕಲ್ ಪೇಟೆ, ಮೇದಾರ ಪೇಟೆ, ಹಳೆ ಪಟ್ನೂಲ್ ಪೇಟೆ, ಹೊಸ ಪಟ್ನೂಲ್ ಪೇಟೆ, ಕುರುಬರ ಪೇಟೆ, ಸಣ್ಣ ಕಂಬಳಿ ಕುರುಬರ ಪೇಟೆ, ಕುಂಚಟಿಗರ ಪೇಟೆ, ಮುತ್ಯಾಲ ಪೇಟೆ, ತಾರಾಮಂಡಲ ಪೇಟೆ, ದೊಡ್ಡಪೇಟೆ, ಚಿಕ್ಕಪೇಟೆ, ಉಪಾರಪೇಟೆ, ದರ್ಜಿಪೇಟೆ, ಕಲ್ಲಾರ ಪೇಟೆ.

ಜಾತಿ ಮತ್ತು ವ್ಯಕ್ತಿಯ ಹೆಸರಿನ ಮೇಲೆ ಸುಮಾರು ಇಪ್ಪತ್ತೇಳು ಪೇಟೆಗಳಿವೆ. ತಿಗಳರ ಪೇಟೆ, ಮಾಮೂಲ್ ಪೇಟೆ, ಹುರಿಯೋಪೇಟೆ, ನಗರ್ತಪೇಟೆ, ತೆಲಗು ಪೇಟೆ, ಖತ್ರಿಪೇಟೆ, ಕೋಮಪೇಟೆ, ಗೌಡನಪೇಟೆ, ಸುಲ್ತಾನಪೇಟೆ, ಮನವರ್ತ ಪೇಟೆ, ಹಲಸೂರು ಪೇಟೆ, ಬಸ್ಟೆಪೇಟೆ, ಸಂತೂಸಾ ಪೇಟೆ, ಮಲ್ದಾರಪೇಟೆ, ಸೌರಾಷ್ಟ್ರ ಪೇಟೆ, ನಾರಾಯಣಶೆಟ್ಟಿ ಪೇಟೆ, ಕವಡಿ ರೇವಣ್ಣ

ಪೇಟೆ, ರಾಮಣ್ಣ ಪೇಟೆ, ಗುಡುಮಯ್ಯಪೇಟೆ, ಲಿಂಗಶೆಟ್ಟಿಪೇಟೆ, ಬಲ್ಲಾಪುರದ ಪೇಟೆ, ಜೋರಿ ಪೇಟೆ, ಹಳೇ ಚಾಮರಾಜಪೇಟೆ, ರಾಣಾಸಿಂಗ್ ಪೇಟೆ, ಕಬ್ಬನ್ ಪೇಟೆ ಇತ್ಯಾದಿ. ಅಂತೆಯೇ ಬಿನ್ನಿಮಿಲ್ ಕಾರ್ಖಾನೆ ಹಾಗೂ ಕಾರ್ಮಿಕರ ಕೊಡುಗೆಯಿಂದ ನಿರ್ಮಾಣವಾದ ಪೇಟೆಯೇ ಬಿನ್ನಿಪೇಟೆ. 'ಉಲನ್, ಕಾಟನ್ ಮತ್ತು ಸಿಲ್ಕ್ ಮಿಲ್ಸ್'ಗೆ ಬಿನ್ನಿ ಮತ್ತು ಕಂಪನಿಯ ಕೊಡುಗೆ ಅಪಾರ. ಹಾಗಾಗಿ ಆ ಕಾರ್ಖಾನೆಗೆ ಬಿನ್ನಿ ಕಾರ್ಖಾನೆ ಎಂಬ ಹೆಸರು ಬಂದಿತು. ಬಿನ್ನಿಮಿಲ್‌ನ ಕಾರ್ಮಿಕರು ಬಂದು ನೆಲೆಸಿದ ಪ್ರದೇಶಕ್ಕೆ ಬಿನ್ನಿಪೇಟೆ ಎಂಬ ಹೆಸರು ಬಂದಿತು.

ಬಿನ್ನಿಮಿಲ್‌ನ ಕಾರ್ಮಿಕರು ಬಿನ್ನಿಪೇಟೆಯಲ್ಲಲ್ಲದೆ ಅಕ್ಕಿಪೇಟೆ, ರಾಣಸಿಂಗ್ ಪೇಟೆ, ಕುರುಬರ ಪೇಟೆ ಮತ್ತು ಅರಳೆಪೇಟೆ ಪ್ರದೇಶಗಳಲ್ಲಿ ನೆಲೆಸಿದ್ದು ಬೆಂಗಳೂರು ನಗರಾಭಿವೃದ್ಧಿಗೆ ಕೊಡುಗೆಯನ್ನು ನೀಡಿದ್ದರು. ಈ ಪ್ರದೇಶಗಳಲ್ಲಿನ ಮನೆಯ ಬಾಡಿಗೆ ತಿಂಗಳಿಗೆ ೪ ರೂ.ಗಳವರೆಗೆ ಇದ್ದಿತು.[೨೭] ಈ ಪ್ರದೇಶಗಳು ಇಡೀ ಬೆಂಗಳೂರು ನಗರದಲ್ಲಿಯೇ ದಟ್ಟ ಜನಸಂದಣಿಯನ್ನು ಹೊಂದಿದ ಪ್ರದೇಶಗಳಾಗಿದ್ದವು. ೦.೦೯ ಚ.ಮೈಲಿಗೆ ೮,೪೮೭ ಜನರು ನೆಲೆಸಿದ್ದರು. ಅಂತೆಯೇ ಒಂದು ಚದರ ಮೈಲಿಗೆ ೯೪,೦೦೦ ಜನರು ವಾಸವಾಗಿದ್ದರು.[೨೮] ಇದು ಇಲ್ಲಿನ ಜನಸಂಖ್ಯೆ ಹೇಗೆ ಹೊಸ ನಗರಗಳ ನಿರ್ಮಾಣಕ್ಕೆ ನಾಂದಿ ಹಾಡಿತು ಎಂಬುದನ್ನು ತಿಳಿಸುತ್ತದೆ.

ನಗರದ ಹಳೆಯ ಪ್ರದೇಶಗಳಲ್ಲಿಯೂ ಕಾರ್ಮಿಕರು ನೆಲೆಸಿದ್ದರು. ಅಲ್ಲಿನ ಜೀವನ ಬಹಳ ಭಿನ್ನವಾಗಿದ್ದಿತು. ತೀರಾ ದುಸ್ತರವಾಗಿತ್ತು. ಸಾಮಾನ್ಯವಾಗಿ ಮನೆಗಳು ಮಣ್ಣಿನ ಮೇಲ್ಛಾವಣಿಯನ್ನು ಹೊಂದಿದ್ದವು. ಒಂದು ಪ್ರದೇಶದ ಸಮೀಕ್ಷೆಯ ಪ್ರಕಾರ ೨೪೬ ಗುಡಿಸಲುಗಳಲ್ಲಿ ೩೦೬ ಕುಟುಂಬಗಳು ವಾಸ ಮಾಡುತ್ತಿದ್ದವು.[೨೯] ಇದು ಕಾರ್ಮಿಕರ ಜೀವನದಲ್ಲಿನ ತಾರತಮ್ಯತಾ ಭಿನ್ನತೆಯನ್ನು ತೋರಿಸುತ್ತದೆ. ಅಂದರೆ ಸಾಮಾನ್ಯವಾಗಿ ಮೇಲ್ದರ್ಜೆಯ ಕಾರ್ಮಿಕರು ಹೊಸ ನಗರಗಳಲ್ಲಿ ವಾಸ ಮಾಡುತ್ತಿದ್ದರೆ, ಕೆಳದರ್ಜೆಯ ಬಡ ಕೂಲಿ ಕಾರ್ಮಿಕರು ಹಳೆಯ ನಗರಗಳಲ್ಲಿ ವಾಸ ಮಾಡುತ್ತಿದ್ದರು. ಇದು ಕಾರ್ಮಿಕರುಗಳ ನಡುವೆ ಅಸಮಾಧಾನ ತರಲು ಕಾರಣವಾಗಿದ್ದಿತು. ಅಲ್ಲದೆ ಸಾಮಾನ್ಯವಾಗಿ ಬ್ರಿಟಿಷ್ ನೌಕರರು ಈ ಹೊಸ ನಗರಗಳಲ್ಲಿ ವಾಸಮಾಡುತ್ತಿದ್ದರು ಎಂದು ಹೇಳಬಹುದು. ಏಕೆಂದರೆ ಅವರ ಜೀವನಮಟ್ಟ ಮೇಲ್‌ಸ್ತರದಲ್ಲಿದ್ದುದರಿಂದ ಐಶಾರಾಮಿ ಜೀವನ ನಡೆಸಲು ಸಾಧ್ಯವಾಗಿದ್ದಿತು. ಅವರಿಗೆ ನೀಡುತ್ತಿದ್ದ ಸಂಬಳವೂ ದೇಶೀಯ ಕಾರ್ಮಿಕರಿಗಿಂತ ಅಧಿಕವಾಗಿತ್ತು. ಹೀಗಾಗಿ ಸ್ಥಳೀಯರು ಗುಡಿಸಲುಗಳಲ್ಲಿ ವಾಸಮಾಡುವ ಪರಿಸ್ಥಿತಿ ಬಂದೊದಗಿತ್ತು.

ಬಿನ್ನಿಮಿಲ್ಸ್ ತನ್ನ ಕಾರ್ಮಿಕರಿಗೆ ಮನೆಗಳ ನಿರ್ಮಾಣಕ್ಕಾಗಿ ನಗರದ ಪಶ್ಚಿಮ ಭಾಗದಲ್ಲಿ ಮೂರು ಎಕರೆ ಪ್ರದೇಶವನ್ನು ಒದಗಿಸಿಕೊಟ್ಟಿತು. ಆದರೆ ಆರ್ಥಿಕ ಮುಗ್ಗಟ್ಟು ಹಾಗೂ ಮೊದಲ ಮಹಾಯುದ್ಧದ ಪರಿಣಾಮವಾಗಿ ಇದರ ಕಾರ್ಯ ಮಂದಗತಿಯಲ್ಲಿ ಸಾಗಿತು. ಹಾಗೆಯೇ

೧೯೨೮ರಲ್ಲಿ ಬಿನ್ನಿಮಿಲ್ ತನ್ನ ಕಾರ್ಮಿಕರಗಾಗಿ ೧೭ ಎಕರೆ ಪ್ರದೇಶವನ್ನು ವಶಪಡಿಸಿಕೊಳ್ಳುವ ಉದ್ದೇಶವನ್ನು ಮೈಸೂರು ಸರ್ಕಾರದ ಮುಂದಿಟ್ಟಿತು.[೩೦] ಕೊನೆಗೆ ಸರ್ಕಾರ ಒಪ್ಪಿಗೆಯನ್ನು ಸೂಚಿಸಿತು. ದಿವಾನ್ ಮಿರ್ಜಾ ಇಸ್ಮಾಯಿಲ್‌ರಿಂದ ಬಿನ್ನಿಪೇಟೆ (ಕಂಪನಿ ಕಾಲೋನಿ)ಯಲ್ಲಿ ಮೊದಲ ೬೦ ಮನೆಗಳು ಶಂಕು ಸ್ಥಾಪನೆಯಾದವು. ೧೯೩೦ರ ವೇಳೆಗೆ ಇವುಗಳ ಸಂಖ್ಯೆ ೧೫೦ಕ್ಕೆ ಏರಿಕೆಯಾಯಿತು. ಕ್ರಮೇಣ ೧೯೪೪ರ ವೇಳೆಗೆ ಇದರ ಸಂಖ್ಯೆ ೩೦೦ಕ್ಕೆ ಏರಿಕೆಯಾಯಿತು. ಕೊನೆಯದಾಗಿ ಬಿನ್ನಿಮಿಲ್‌ನ ಒಟ್ಟು ಶಾಶ್ವತ ಕಾರ್ಮಿಕರ ಮನೆಗಳು ಈ ನಗರದಲ್ಲಿ ಶೇ. ೧೨.೨ಕ್ಕೆ ಏರಿಕೆಯನ್ನು ಕಂಡಿತು. ಇಲ್ಲಿ ಬಾಡಿಗೆ ರೂ. ೧/೪ ರಿಂದ ೨ ರೂ.ಗಳವರೆಗೆ ಇದ್ದಿತು. ಆದರೂ ಸಹ ಬಿನ್ನಿಮಿಲ್, ನಗರದಲ್ಲಿಯೇ ಆದರ್ಶ ಕಾರ್ಮಿಕರನ್ನು ಹೊಂದಿರುವ ಕಾರ್ಖಾನೆ ಎಂಬ ಹಣೆಪಟ್ಟಿಯಿಂದ ದೂರವೇ ಉಳಿಯಿತು.[೩೧]

ಫೆಬ್ರುವರಿ ೪, ೧೯೨೪ರಂದು ಗಾರೆಯ ನೀರಿನ ಟ್ಯಾಂಕ್ (Sedimentation Tank)ನ್ನು ನಿರ್ಮಾಣ ಮಾಡುವ ವಿಷಯವಾಗಿ ಸಭೆ ನಡೆದು, ಅಗ್ರಹಾರ ಟ್ಯಾಂಕ್ ಮತ್ತು ಕೆಮ್ಮಣ್ಣುಗುಂಡಿ ರಸ್ತೆಗಡಿಯ ನಡುವೆ ಇರುವ ೯೦ x ೧೫೦ ಅಡಿಗಳ ಪ್ರದೇಶವನ್ನು ಈ ಉದ್ದೇಶಕ್ಕಾಗಿ ನೀಡಬೇಕೆಂದು ಬೆಂಗಳೂರು ಮುನ್ಸಿಪಲ್ ಕಛೇರಿಗೆ ಬೆಂಗಳೂರು ಉಣ್ಣೆ, ಹತ್ತಿ ಮತ್ತು ರೇಷ್ಮೆ ಕಾರ್ಖಾನೆಯ ಅಧಿಕಾರಿಗಳು ತಮ್ಮ ಬೇಡಿಕೆ ಪತ್ರವನ್ನು ಮುಂದಿಟ್ಟರು.[೩೨] ಈ ಪತ್ರದಲ್ಲಿ ಇದರಿಂದ ಹೊರಬರುವ ಕೊಳಚೆ ನೀರನ್ನು ಶುದ್ಧೀಕರಿಸುವ ವಿಚಾರವಾಗಿಯೂ ಪ್ರಸ್ತಾಪ ಇದ್ದಿತು. ಮುನ್ಸಿಪಲ್ ಮಂಡಳಿಯು ಇದಕ್ಕೆ ಯಾವುದೇ ಆಕ್ಷೇಪಣೆ ಇಲ್ಲದೆ ತಿಂಗಳಿಗೆ ಒಂದು ರೂಪಾಯಿ ಬಾಡಿಗೆಯಂತೆ ಈ ಸ್ಥಳವನ್ನು ನೀಡಲು ಒಪ್ಪಿತು. ಆ ಸಂದರ್ಭದಲ್ಲಿ ಬೆಂಗಳೂರು ನಗರ ಪುರಸಭೆಯ ಕಮಿಷನರ್ ಎಂ.ಜಿ. ಕೃಷ್ಣಸ್ವಾಮಿರಾವ್ ಆಗಿದ್ದು, ಬಿ. ನಾಗಪ್ಪನವರು ಮೈಸೂರು ಸರ್ಕಾರದ ಸ್ಥಳೀಯ (Local) ಮತ್ತು ಶಾಸನ ಸಭೆ (Ligislative)ಯ ವಿಭಾಗದ ಕಾರ್ಯದರ್ಶಿಯಾಗಿದ್ದರು. ವೆಂಕೋಬರಾವ್ ಅವರು ಬೆಂಗಳೂರು ಜಿಲ್ಲೆಯ ಉಪಕಮಿಷನರ್ ಆಗಿದ್ದರು. ಬಿ. ಮಹಮದ್ ಉಸ್ಮಾನ್ ಅವರು ಮಹಾರಾಜ ಮೈಸೂರು ಸರ್ಕಾರದ ಸ್ಯಾನಿಟರಿ ಕಮಿಷನರ್ ಆಗಿದ್ದು, ಇವರು ಈ ಪ್ರದೇಶವನ್ನು ಪರೀಕ್ಷೆ ನಡೆಸಿ, ೧೯ ಅಗಸ್ಟ್ ೧೯೨೪ರಲ್ಲಿ ಇದಕ್ಕೆ ಅನುಮತಿ ನೀಡಿದರು.[೩೩] ಇವರು ಇದೇ ಮಾದರಿಯ ಗಾರೆಯ ಟ್ಯಾಂಕ್ ಅನ್ನು ಚಾಮರಾಜ ಪೇಟೆಯಲ್ಲೂ ನಿರ್ಮಾಣ ಮಾಡಬಹುದು ಎಂಬುದಾಗಿ ಸಲಹೆ ನೀಡಿದರು. ಬಿನ್ನಿಮಿಲ್‌ನ ಈ ಕಾರ್ಯವು ಪರೋಕ್ಷವಾಗಿ ಬೆಂಗಳೂರು ನಗರಾಭಿವೃದ್ಧಿಗೆ ಹಾಗೂ ಸ್ವಚ್ಛತೆಗೆ ಕಾರಣವಾಗಿ ಮಾದರಿಯಾಯಿತು ಎಂತಲೇ ಹೇಳಬಹುದು.

ಇದರ ಜೊತೆಯಲ್ಲಿಯೇ ಬಿನ್ನಿಮಿಲ್ ಹಾಗೂ ಮೈಸೂರು ಸ್ಪಿನ್ನಿಂಗ್ ಮತ್ತು ಮ್ಯಾನುಫ್ಯಾಕ್ಚರಿಂಗ್ ಕಂಪನಿ ಲಿಮಿಟೆಡ್, ಎರಡೂ ಸೇರಿ ಅಗ್ರಹಾರ ಹೊಸಕೆರೆ ಟ್ಯಾಂಕ್

ಮತ್ತು ಜಕ್ಕನಾಯನ ಕೆರೆ ಟ್ಯಾಂಕ್‌ನ ನೀರನ್ನು ಬಳಸಿಕೊಳ್ಳುವುದರ ಪ್ರಸ್ತಾಪವನ್ನು ೧೦ ಜುಲೈ ೧೯೨೬ರಲ್ಲಿ ಬೆಂಗಳೂರು ನಗರ ಮುನ್ಸಿಪಲ್ ಕಛೇರಿಗೆ ತಿಳಿಸಿದವು.[೩೪] ಈ ಸಂದರ್ಭದಲ್ಲಿ ಕೆ.ವಿ.ಅನಂತರಾಮನ್‌ರವರು ಮೈಸೂರು ಸರ್ಕಾರದ ಲೋಕಲ್ ಮತ್ತು ಲೆಜಿಸ್‌ಲೇಟಿವ್ ವಿಭಾಗದ ಕಾರ್ಯದರ್ಶಿಯಾಗಿದ್ದರು. ಅಂತೆಯೇ ಬೆಂಗಳೂರು ತಾಲ್ಲೂಕು ಅಮಿಲ್ದಾರರು ೪೦ ವರ್ಷಗಳವರೆಗೆ ಅಗ್ರಹಾರ ಟ್ಯಾಂಕ್‌ನ ನೀರನ್ನು ಉಪಯೋಗಿಸುವುದರ ಬಗ್ಗೆ ಮಿಲ್‌ಗೆ ಅನುಮತಿಯನ್ನು ನೀಡಿ, ಈ ವಿಷಯವಾಗಿ ಯಾವುದೇ ರೀತಿಯಲ್ಲಿ ತಡೆಮಾಡದಿರುವುದರ ಬಗ್ಗೆ ಭರವಸೆ ನೀಡಿದರು.

೧೦ ಡಿಸೆಂಬರ್ ೧೯೨೦ರಲ್ಲಿ ಬಿನ್ನಿಮಿಲ್, ಬೆಂಗಳೂರು ನಗರದ ಮಾಗಡಿ ರಸ್ತೆಯಲ್ಲಿ ಕೈಗಾರಿಕಾ ಉಪನಗರವನ್ನು ಸ್ಥಾಪಿಸುವ ಸಲುವಾಗಿ ಸೈಟುಗಳನ್ನು ಗುತ್ತಿಗೆ ನೀಡಬೇಕೆಂದು ಬೆಂಗಳೂರು ನಗರದ ಮುನ್ಸಿಪಲ್ ಅನ್ನು ಕೇಳಿಕೊಂಡಿತು.[೩೫] ಆ ಸಂದರ್ಭದಲ್ಲಿ ಬಿ.ಕೆ. ಗರುಡಚಾರ್ ಅವರು ಬೆಂಗಳೂರು ಪುರಸಭೆ ಮಂಡಳಿಯ ಅಧ್ಯಕ್ಷರಾಗಿದ್ದರು. ಅರವಮುದೈಂಗಾರ್ ಅವರು ಮೈಸೂರು ಸರ್ಕಾರದ ಕಾರ್ಯದರ್ಶಿಯಾಗಿದ್ದರು. ಈ ಗುತ್ತಿಗೆಯು ೫೦ ವರ್ಷಗಳವರೆಗಿನ ಕರಾರು ಆಗಿತ್ತು. ಹಾಗೆಯೇ ಉಪನಗರ ನಿರ್ಮಾಣಕ್ಕೆ ಒಟ್ಟಾರೆ ಆದ ವೆಚ್ಚದಲ್ಲಿ ಶೇ.೯ರಷ್ಟನ್ನು ಬರಿಸುವುದಾಗಿ ಸಮಿತಿ ಹಾಗೂ ಸಲಹಾ ಮಂಡಳಿ ತಿಳಿಸಿತು. ೧೫ ಮಾರ್ಚ್ ೧೯೨೧ರಲ್ಲಿ ಕೈಗಾರಿಕಾ ಉಪನಗರ ನಿರ್ಮಾಣಕ್ಕೆ ಸೈಟ್ ಸಂಖ್ಯೆ ೨೩, ೨೪ ಮತ್ತು ೨೫ ಅನ್ನು ಮೈಸೂರು ಸರ್ಕಾರ ವಶಪಡಿಸಿಕೊಂಡು ಮಿಲ್‌ಗೆ ಒಪ್ಪಿಸಿತು.[೩೬] ಬಿನ್ನಿಮಿಲ್‌ನ ಈ ಎಲ್ಲಾ ಯೋಜನೆಗಳು ಹಾಗೂ ಆಯಾಮಗಳು ನೇರವಾಗಿ ಬೆಂಗಳೂರು ನಗರದ ಅಭಿವೃದ್ಧಿಗೆ ಕೊಡುಗೆಯನ್ನು ನೀಡಿತು ಎಂದು ಹೇಳಬಹುದು.

೧೯೩೩ರಲ್ಲಿ ಬಿನ್ನಿಮಿಲ್‌ಗೆ ೧,೯೦,೦೦೦ ರೂ.ಗಳ ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಮಾಡುವ ಯೋಜನೆ ಹಾಕಿಕೊಳ್ಳಲಾಯಿತು. ಅಕ್ಟೋಬರ್ ೩, ೧೯೩೫ರಲ್ಲಿ ಇದನ್ನು ಜಾರಿಗೆ ತರಲಾಯಿತು.[೩೭] ಹಾಗೆಯೇ ಬಿನ್ನಿಮಿಲ್‌ಗಾಗಿ ೧೨ ಮಾರ್ಚ್ ೧೯೩೫ರಲ್ಲಿ ೧.೯ ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಕಂಬೈನ್ಡ್ ಜವೆಲ್ ಫಿಲ್ಟರ್ಸ್ (Combined Jewell Filters)ನ ನಿರ್ಮಾಣದ ಯೋಜನೆಯನ್ನು ಹಾಕಿಕೊಳ್ಳಲಾಯಿತು.[೩೮] ಅಂತೆಯೇ ೨೭ ಫೆಬ್ರುವರಿ, ೧೯೩೫ರಲ್ಲಿ ಬಿನ್ನಿಮಿಲ್‌ಗೆ ನೀರು ಪೂರೈಕೆ ಮಾಡಿದಂತೆ ಬಸವನಗುಡಿಗೂ ಸಹ ನೀರನ್ನು ಪೂರೈಕೆ ಮಾಡುವುದರ ಬಗ್ಗೆ ಯೋಜನೆಯನ್ನು ಹಾಕಿಕೊಳ್ಳಲಾಯಿತು. ಈ ಎಲ್ಲಾ ಯೋಜನೆಗಳನ್ನು ಒಳಗೊಂಡಂತೆ ಅಂದಿನ ಮೈಸೂರು ಸಂಸ್ಥಾನದ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್ ಅವರು ೧೯೩೩ & ೧೯೩೫ರಲ್ಲಿ ಎರಡು ವರದಿಗಳನ್ನು ಮೈಸೂರು ಸರ್ಕಾರಕ್ಕೆ ಸಲ್ಲಿಸಿದರು. ಅದು ಈ ಕೆಳಕಂಡಂತಿದೆ.

ESTIMATE FOR 1,90,000/- FOR SUPPLY OF WATER TO BINNY MILLS, BANGALORE.

Dewan's Minute

File No: P.W.D. 1684, 1933.

The rate up to 30,000 gallons per day proposed in the case of the Indian Institute of Science, would not apply to these Mills at all as their minimum daily consumption will be 60,000 gallons. It would appear from their letter that the Mills themselves are prepared to pay at the rate of 14 annas per thousand gallons up to 60,000 gallons per day. We need not, therefore, suggest this rate for less consumption up to 50,000 gallons as in the case of the Indian institute of Science. For quantities taken in excess of 100,000 gallons, the Mills themselves offer to pay 10 annas per thousand gallons. It will thus be seen that the scale proposed to be applied in the case of the Mills requires further consideration.

There are other mills and industrial concerns in the area to which it is proposed to take a new main whose consumption would not be as large as that of the Bangalore Woollen, Cotton and Silk Mills. A sliding scale providing for gradually lower rates for higher consumptions might be considered as one of the alternatives. The Executive Engineer has, however, suggested a flat rate of 12 annas per thousand gallons. It is necessary to see taking the probabale quantities that would be consumed by the concerns, which arrangement whether a sliding scale of rates or a flat rate would give us a larger amount. I am not sure if we have fairly reliable information in regard to the quantities of water that might be consumed by these mills and by other concerns in the area which would have to be supplied from the new main.

Another point on which it would be desirable to have information is what it is now costing these mills to provide themselves with water from their

present supply which they wish to replace by a supply from the Tank. I believe these mills have put up a number of bore-wells, but the water tapped in them is hard water requiring chemical treatment to make it fit for use for the various processes. It is fair to infer from their application for T. Tank water that the water thy are now using, is either unsatisfactory or unnecessarily expensive. It would be an advantage to the mills if they get water from the 'T'. Tank at less cost than that which they are paying for their present supply.

In view of what is stated above, I think it is desirable that we should make some calculations of the probable demands for water and see what would the realisable amounts by the application of sliding scale and flat rates before we can decide what rates it would be fair to charge to the industrial concerns in this area including the Bangalore Woollen, Cotton and Silk Mills.

****

**For Disposal by Circulation**

No. C. 230

1934-5

General and Revenue Secretariat

Council Matter

Subject

Scheme for laying an 18" cast iron independent main form the combined Jewel Filters to Basavanagudi, to improve the supply of water to that extension and also facilitate the supply of water to industrial concerns like the Binny Mills.

Circulated to the Members of council.

By order,

27th February 1935,

Chief Secretary to Govt.

**Submitted to his Highness:**

1. His highness's gracious approval was obtained to keep under abeyance the estimate for Rs. 82,600/- sanctioned for laying a 10 independent main for supply of water to the industrial concerns in Bangalore city.

2. The Secretary, Public works department, has now submitted an estimate amounting to Rs. 1.9 lakhs for laying an 18 cast iron independent main form the Combined Jewell Filters up to Binny Mills which forms the first stage of the scheme for laying the main to improve ultimately the water supply to the Basavanagudi Extension at a cost of Rs. 3.14 lakhs. Of the estimated amount of Rs. 1.9 lakhs, the cost of pipes ordered from the Mysore Iron works, Bhadravati works out to Rs. 1.47 lakhs.

3. The revenue guaranteed by the Mills is Rs. 5,434 per year in addition to the present revenue of Rs. 2,300 which is conserved. This revenue is expected to increase considerably when the whole scheme is taken up and completed as the Minerva Mills, Mysore Mills, smaller factories and the suburban colonies are expected to take supplies from the main for industrial purposes. Besides, the present annual expenditure of about Rs. 12,000 being the power and working expenses of the booster pumps now working in the extensions will be saved later on.

4. The cost of the scheme has to be met entirely by the Bangalore City Municipality and the manner in which it has to be financed will be taken up with the Bangalore City Municipality.

5. The estimate which has been approved by the members of council and myself may graciously be sanctioned.

**12/3/35** **Mirza M. Ismail**

**Dewan**

**Bangalore**

**12 March 1935.**

**ಅಡಿಟಿಪ್ಪಣಿಗಳು**

೧. ತಂಬಂಡ ವಿಜಯ್ ಪೂಣಚ್ಚ (ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ಚರಿತ್ರೆ ಲೇಖಕರು: ಜಾನಕಿ ನಾಯರ್, ೨೦೦೧, ಪು–೮೩೨.

೨. ಅದೇ.

೩. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೪೧

೪. ಜಾನಕಿ ನಾಯರ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು.೧೯೨.

೫. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೪೧

೬ ಜಾನಕಿ ನಾಯರ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು.೧೯೨.

೭ ಅದೇ, ಪುಟ.೨೧೮

೮. ಅದೇ, ಪು.೧೯೮

೯. ಅದೇ.

೧೦. ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ೨೦೦೨, ಪು.೨೪೫.

೧೧. ಅದೇ, ಪು. ೫೪

೧೨. ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು, ಕಾನ್ಫಿಡೆನ್ಸಿಯಲ್ ಫೈಲ್, ಜೂನ್, ೧೯೨೫, ನಂ. ೮೪

೧೩. ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು, ಬೆಂಗಳೂರು ಮುನ್ಸಿಪಲ್ ಫೈಲ್, ೨೩, ಅಗಸ್ಟ್ ೧೯೩೩, ನಂ.ಸಿ. ೨೩೦.

೧೪. ಸ್ಪೀಚಸ್ ಬೈ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್, ೧೯೨೧–೧೯೨೭, ೧೯೨೮.

೧೫. ದಿ ಹಿಂದೂ ದಿನಪತ್ರಿಕೆ, ಶನಿವಾರ, ಸೆಪ್ಟೆಂಬರ್ ೧೩, ೨೦೦೮.

೧೬. ಸೂರ್ಯನಾಥ ಕಾಮತ್, ಲಕ್ಷ್ಮಣ್ ತೆಲಗಾವಿ (ಸಂ.), ಇತಿಹಾಸ ದರ್ಶನ, ಸಂ.೫, ಪು.೧೯೦.

೧೭. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೪೨

೧೮. ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ೨೦೦೨, ಪು.೩೪೩

೧೯. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೨೯೧

೨೦. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ಚರಿತ್ರೆ ಲೇಖಕರು: ಜಾನಕಿ ನಾಯರ್, ೨೦೦೧, ಪು–೮೩೭.

೨೧. ರಾವ್ ಎಸ್.ಆರ್. (ಸಂ.), ಬೆಂಗಳೂರು ಥ್ರೂ ದ ಏಜಸ್, ಪು.೨೨

೨೨. ಭೈರಪ್ಪ ಎಸ್.ಎಲ್., ಭಿತ್ತಿ, ೨೦೦೭, ಪು. ೭೦

೨೩. ಅದೇ, ಪು. ೯೦.

೨೪. ಅದೇ, ಪು. ೧೮೯.

೨೫. ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು, ಜನರಲ್ ಆ್ಯಂಡ್ ಮಿಸಲೇನಿಯರ್, ೩ನೇ ಏಪ್ರಿಲ್ ೧೯೨೫, ಫೈಲ್ ನಂ: ೫೨೧ ಟಿಎಡಿಸಿ.

೨೬. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೬೪.

೨೭. ಜಾನಕಿ ನಾಯರ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು.೨೨೦.

೨೮. ಅದೇ.

೨೯. ಅದೇ.

೩೦. ಅದೇ.

೩೧. ಅದೇ.

೩೨. ಕರ್ನಾಟಕ ಸ್ಟೇಟ್ ಆರ್ಕೈಟ್ಸ್, ಬೆಂಗಳೂರು, ಬೆಂಗಳೂರು ಮುನ್ಸಿಪಲ್ ರಿಪೋರ್ಟ್, ೩ನೇ ಏಪ್ರಿಲ್ ೧೯೨೪, ಫೈಲ್ ನಂ.೨೫

೩೩. ಅದೇ.

೩೪. ಅದೇ.

೩೫. ಅದೇ.

೩೬. ಅದೇ.

೩೭. ಬೆಂಗಳೂರು ಮುನ್ಸಿಪಲ್ ಫೈಲ್ ನಂ: ಪಿ.ಡಬ್ಲ್ಯೂಡಿ. ೧೬೮೪, ೧೯೩೫.

೩೮. ಅದೇ, ನಂ. ಸಿ.೨೩೦, ೧೯೩೪-೩೫

ಅಧ್ಯಾಯ ೪

# ಬಿನ್ನಿಮಿಲ್‌ನ ಕಾರ್ಮಿಕ ಸಂಘದ ಇತಿಹಾಸ

೪.೧. ಸಂಘದ ಸ್ಥಾಪನೆಯ ಹಿನ್ನೆಲೆ

೪.೨. ಸ್ವಾತಂತ್ರ್ಯ ಚಳವಳಿಗೆ ಇವರ ಕೊಡುಗೆ

೪.೩. ಸ್ವತಂತ್ರ ನಂತರದ ಸಂಘಗಳು

೪.೪. ಕಾರ್ಮಿಕ ಚಳವಳಿಗಳು ಹಾಗೂ ಮುಷ್ಕರಗಳು

೪.೫. ದಿನಗೂಲಿ, ಅಸಂಘಟಿತ ಕಾರ್ಮಿಕರು ಇತ್ಯಾದಿ

ಬಿನ್ನಿಮಿಲ್ ಕಾರ್ಖಾನೆಯ ಕಾರ್ಮಿಕರ ಸಂಘಟನೆಯನ್ನು ತಿಳಿಯುವುದಕ್ಕೂ ಮೊದಲು ಅಂತರಾಷ್ಟ್ರೀಯ, ರಾಷ್ಟ್ರ ಹಾಗೂ ರಾಜ್ಯ ಮಟ್ಟದ ಕಾರ್ಖಾನೆ ವಲಯದಲ್ಲಿ ಕಾರ್ಮಿಕರು ಹೇಗೆ ತಮ್ಮ ಸಮಸ್ಯೆಗಳ ವಿರುದ್ಧವಾಗಿ ಸಂಘಟನೆಯಲ್ಲಿ ತೊಡಗಿದರು ಎಂಬುದನ್ನು ತಿಳಿಯುವುದು ಅವಶ್ಯಕ. ಆಧುನಿಕ ಕಾರ್ಮಿಕ ಸಂಘಗಳ ಬೇರುಗಳನ್ನು ಕೈಗಾರಿಕಾ ಕ್ರಾಂತಿ ಮತ್ತು ಅದರ ಅಂಗವಾದ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಾಣಬಹುದು. ಕೈಗಾರಿಕಾ ಕ್ರಾಂತಿಯಿಂದ ವಿಶ್ವದ ಹಲವು ಭಾಗಗಳಲ್ಲಿ ಬಂಡವಾಳಶಾಹಿಗಳು ಏಳಿಗೆ ಹೊಂದಿ ಕಾರ್ಮಿಕರನ್ನು ಅಸಡ್ಡೆಯಿಂದ ನೋಡಿಕೊಂಡಿದ್ದರಿಂದ ಕಾರ್ಮಿಕ ಸಂಘಟನೆ ಮತ್ತು ಸಂಘಗಳು ಹುಟ್ಟಿಕೊಂಡವು.[೧] ಬಂಡವಾಳಶಾಹಿ ಬೇರುಗಳು ವಿಷಫಲ ಉಣಿಸುತ್ತಿದ್ದರಿಂದ ಕಾರ್ಮಿಕರು ವ್ಯವಸ್ಥೆಯ ವಿರುದ್ಧ ಸಂಘಟಿತರಾಗುತ್ತಾ ಮುನ್ನಡೆದರು.

ಅಖಿಲ ಭಾರತ ಕಾರ್ಮಿಕ ಸಂಘಗಳ ಏಳಿಗೆಯ ಒಂದು ಭಾಗವಾಗಿ ಬೆಂಗಳೂರು ನಗರದ ಕಾರ್ಮಿಕ ಸಂಘಟನೆಗಳಿದ್ದವು. ಆರಂಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಇದು ಭಿನ್ನವಾಗಿಯೇ ಇತ್ತು. ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್, ಸರ್.ಎಂ.ವಿಶ್ವೇಶ್ವರಯ್ಯನವರು ಕೈಗಾರಿಕೆಗಳ ಏಳಿಗೆಗೆ ಅವಕಾಶ ಕಲ್ಪಿಸಿದ್ದರಾದರೂ ಕಾರ್ಮಿಕರ ಸಂಘಟನೆಯನ್ನು ಸಕರಾತ್ಮಕವಾಗಿ ನೋಡಲಿಲ್ಲ. ೧೯೨೬ರ ಬಿನ್ನಿಮಿಲ್ ಮುಷ್ಕರಕ್ಕೆ ಸಂಬಂಧಪಟ್ಟಂತೆ ಮಿರ್ಜಾ ಇಸ್ಮಾಯಿಲ್ ಅವರ ನಡವಳಿಕೆಗೆ ಬೇಸತ್ತು ನಾರಿಮನ್‌ರು ಇವರಿಗೆ 'ದಕ್ಷಿಣ ಭಾರತದ ಪುಟ್ಟ ಮೊಘಲ್' ಎಂಬ ಅನ್ವರ್ಥ ಬಿರುದನ್ನು ಕೊಟ್ಟರು.[೨] ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದ ಕಾರ್ಮಿಕ ಚಳವಳಿ ಮಹತ್ವ ಪಡೆದುಕೊಂಡಿದೆ.

ವೆಬ್ಸ್‌ರವರ ವ್ಯಾಖ್ಯಾನದಂತೆ "ಕಾರ್ಮಿಕ ಸಂಘವು ಕೂಲಿ ಅಥವಾ ವೇತನ ಪಡೆಯುವವರ ನಿರಂತರ ಸಂಸ್ಥೆಯಾಗಿದ್ದು ದುಡಿಯುವ ವರ್ಗದ ಸ್ಥಿತಿ-ಗತಿಗಳನ್ನು ಸುಧಾರಿಸುವ ಅಥವಾ

ಅಭಿವೃದ್ಧಿ ಪಡಿಸುವುದಾಗಿದೆ." ಮಾಜಿ ಕಾರ್ಮಿಕ ಮಂತ್ರಿಗಳು ಹಾಗೂ ಮಾಜಿ ಉಪರಾಷ್ಟ್ರಪತಿಗಳಾದ ವಿ.ವಿ.ಗಿರಿಯವರ ಪ್ರಕಾರ "ಕಾರ್ಮಿಕ ಸಂಘವು ಕೆಲಸಗಾರರ ಐಚ್ಚಿಕ ಸಂಘಟನೆಯಾಗಿದ್ದು, ಕಾರ್ಮಿಕ ಹಿತಾಸಕ್ತಿಯನ್ನು ರಕ್ಷಿಸಲು ಸಾಮೂಹಿಕ ಶಕ್ತಿಯಿಂದ ಕೆಲಸ ಮಾಡುವ ಸಂಸ್ಥೆಯಾಗಿದೆ."

ಟ್ರೇಡ್ ಯೂನಿಯನ್‌ಗಳು ಲೆನಿನ್ ಅಭಿಪ್ರಾಯ ಪಡುವಂತೆ "ಆಡಳಿತ ಮತ್ತು ವ್ಯವಸ್ಥಾಪನೆಯ ಶಾಲೆಗಳು, ಕಮ್ಯುನಿಸಂ ಶಾಲೆಗಳು, ಪಾರ್ಟಿಯ ಮತ್ತು ಕಾರ್ಮಿಕ ಸಂಘಗಳ ಉದ್ದೇಶಗಳು ಒಂದೇ ಆಗಿರುತ್ತವೆ."

"ಕೂಲಿಕಾರರ ಜೀವನ ಹಾಗೂ ಅವರ ಪರಿಸ್ಥಿತಿಯನ್ನು ಸುಧಾರಿಸಲು ನಿರಂತರವಾಗಿ ಕೂಲಿಕಾರರಿಂದಲೇ ಸಂಘಟಿಸಲ್ಪಟ್ಟ ಸಂಘಟನೆ"ಯೇ ಕಾರ್ಮಿಕ ಸಂಘವೆಂದು ಬಿ.ಎಲ್.ಗ್ರೋವರ್ ಮತ್ತು ಎಸ್.ಗ್ರೋವರ್ ವ್ಯಾಖ್ಯಾನಿಸಿದ್ದಾರೆ. ಕಾರ್ಮಿಕ ಸಂಘಗಳು ಸಾಮಾನ್ಯವಾಗಿ ದುಡಿಯುವವರ ಸಂಘವಾಗಿದ್ದು ಇಲ್ಲಿ ಅವರ ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸಿ, ವೃದ್ಧಿಸಿ ಸಾಮಾಜಿಕ ಸ್ಥಾನಮಾನ ಸುಧಾರಿಸುವುದಾಗಿದೆ.



ಇಂಗ್ಲೆಂಡ್ ಕಾರ್ಮಿಕ ಚಳವಳಿಯ ತಾಯ್ನಾಡಾಗಿದೆ. ಕೈಗಾರಿಕಾ ಕ್ರಾಂತಿಯ ಪ್ರಭಾವ ಆಧುನಿಕ ಕಾರ್ಮಿಕ ಸಂಘಗಳ ಸ್ಥಾಪನೆಗೆ ಹಿನ್ನೆಲೆಯಾದರೂ ಕೈಗಾರಿಕಾ ಕ್ರಾಂತಿಪೂರ್ವದಲ್ಲಿ ಅವು ಅಸ್ತತ್ವದಲ್ಲಿರಲಿಲ್ಲ ಎಂದು ಹೇಳಲಾಗದು. ಇಂಗ್ಲೆಂಡಿನ ಲಂಕಾಶೈರ್ ಮುಂತಾದ ಕೈಗಾರಿಕಾ ನಗರಗಳಲ್ಲಿ ಕಾರ್ಮಿಕರು ಅಧಿಕವಾಗಿದ್ದರೂ ಶಕ್ತಿಯುತ, ಸ್ಥಿರವಾದ, ದೃಢವಾದ ನೆಲೆಗಟ್ಟಿನ ಮೇಲೆ ಕಾರ್ಮಿಕ ಸಂಘಗಳು ಅಸ್ತಿತ್ವಕ್ಕೆ ಬಂದಿರಲಿಲ್ಲ.[೩] ಕಾರ್ಮಿಕರ ಜೀವನ ದುಬಾರಿಯಾಗಿ, ಕೈತುಂಬಾ ಕೆಲಸ ನಿರ್ವಹಿಸುತ್ತಾ, ಜೀವನ ನಿಭಾಯಿಸಲು ಹೆಣಗುತ್ತಿದ್ದರು. ಅಲ್ಲಿನ ಸರ್ಕಾರವೂ ಸಹ ೧೭೯೯ರ ಕಾಲಕ್ಕೆ ಇಂತಹ ಕಾರ್ಮಿಕ ಸಂಘಟನೆಗಳನ್ನು ಮುಟ್ಟುಗೋಲು ಹಾಕಲು ಪ್ರಯತ್ನಿಸಿತು. ಕೈಗಾರಿಕಾ ಕ್ರಾಂತಿಗೂ ಮೊದಲು ಕಾರ್ಮಿಕರು ಮತ್ತು ಮಾಲೀಕರ ಸಹಭಾಗಿತ್ವದಲ್ಲಿ 'ವೃತ್ತಿಸಂಘಗಳು' ಅಸ್ತಿತ್ವದಲ್ಲಿದ್ದು ಕಾರ್ಯನಿರತವಾಗಿದ್ದವು. ಈ ಸಂಘಗಳು ಆಧುನಿಕ ಕಾರ್ಮಿಕ ಸಂಘಗಳ ಗುಣಲಕ್ಷಣಗಳನ್ನು ಹೊಂದಿದಂತೆ ಕಂಡುಬರುವುದಿಲ್ಲ.

ಅಂತೆಯೇ ಭಾರತದಲ್ಲೂ ಸ್ಥಿರರೂಪದ, ಶಕ್ತಿಯುಳ್ಳ ಕಾರ್ಮಿಕ ಸಂಘಗಳು ಕೈಗಾರಿಕಾ ಕ್ರಾಂತಿಯವರೆಗೂ ಅಸ್ತಿತ್ವಕ್ಕೆ ಬರಲಿಲ್ಲ.[೪] ಸ್ವತಂತ್ರ ಪೂರ್ವದಲ್ಲಿ ಮೊದಲುಗೊಂಡು ಹಲವಾರು ಸ್ಥಿರ ರೂಪದ ಸೈದ್ಧಾಂತಿಕ ನೆಲಗಟ್ಟನ್ನು ಪಡೆದ ಕಾರ್ಮಿಕ ಸಂಘಗಳು ಅಸ್ತಿತ್ವಕ್ಕೆ ಬಂದವು. ಅವುಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ (AITUC) ೧೯೨೦.

೨. ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (INTUC) ೧೯೪೭

೩. ಹಿಂದ್ ಮಜದೂರ್ ಸಭಾ (HMS) ೧೯೪೮.

೪. ಯೂನೈಟೆಡ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (UTUC) ೧೯೪೯.

೫. ಭಾರತೀಯ ಮಜದೂರ್ ಸಭಾ (BMS) ೧೯೫೪.

೬. ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ (CITC) ೧೯೭೦.

ಬ್ರಿಟಿಷರು ೧೯ನೇ ಶತಮಾನದಲ್ಲಿ ದೊಡ್ಡ ಮತ್ತು ಆಧುನಿಕ ಯಂತ್ರಗಳ ಕೈಗಾರಿಕೆಗಳನ್ನು ಭಾರತದಲ್ಲಿ ಸ್ಥಾಪಿಸಲು ಮುಂದಾದಂತೆಯೇ, ಕಾರ್ಮಿಕ ಸಂಘಗಳ ಏಳಿಗೆಯೂ ಆರಂಭವಾಯಿತು. ಅಹಮದಾಬಾದ್‌ನಲ್ಲಿ ಮೊಟ್ಟ ಮೊದಲಬಾರಿಗೆ ಕಾರ್ಮಿಕ ಸಂಘ ಅಸ್ತಿತ್ವಕ್ಕೆ ಬಂದಿತು. ಅಹಮದಾಬಾದಿನ ಹತ್ತಿಗಿರಣಿಯ ಏಜೆಂಟರ ಮಗಳಾದ 'ಅನುಸೂಯಾಬಿನ್ ಸಾರಾಬಾಯಿ' ಇಂಗ್ಲೆಂಡಿಗೆ ಭೇಟಿ ನೀಡಿ ಅಲ್ಲಿನ ಕಾರ್ಮಿಕ ಸಂಘಗಳು ನಿರ್ವಹಿಸುತ್ತಿದ್ದ ಕಾರ್ಯಗಳನ್ನು ವೀಕ್ಷಿಸಿ ತಾಯ್ನಾಡಿಗೆ ಹಿಂದಿರುಗಿದರು. ಅವರ ಮಾರ್ಗದರ್ಶನದಲ್ಲಿ ೦೪.೧೨.೧೯೧೨ ರಲ್ಲಿ ಕಾರ್ಮಿಕ ಸಂಘ ಅಹಮಾದಾಬಾದಿನಲ್ಲಿ ಸ್ಥಾಪನೆಯಾಯಿತು.[೫] ಈ ಅಂಶವನ್ನು ಗಮನಿಸಿದಾಗ ಭಾರತದಲ್ಲಿ ಪ್ರಥಮ ಕಾರ್ಮಿಕ ಸಂಘಕ್ಕೆ ನಾಯಕತ್ವವನ್ನು ನೀಡಿದವರು ಮಹಿಳೆಯಾಗಿದ್ದಾರೆ. ನಂತರ ಮದ್ರಾಸಿನಲ್ಲಿ ಡಾ.ಅನಿಬೆಸೆಂಟರ ಮಾರ್ಗದರ್ಶನದಲ್ಲಿ ಬಿ.ಪಿ.ವಾಡಿಯಾ ಅವರು 'ಮದ್ರಾಸ್ ಕಾರ್ಮಿಕ ಸಂಘ'ವನ್ನು ಸ್ಥಾಪಿಸಿದರು.

ಹೀಗೆ ಅಖಿಲ ಭಾರತ ಮಟ್ಟದಲ್ಲಿ ಕಾರ್ಮಿಕ ಸಂಘಟನೆಗಳು ಆರಂಭವಾದರೆ, ಮೈಸೂರು ಸಂಸ್ಥಾನದಲ್ಲಿ ಕಾರ್ಮಿಕ ಸಂಘಟನೆ ಕೈಗಾರಿಕಾ ರಂಗ ಬೆಳೆದ ಪ್ರಮಾಣದಲ್ಲಿ ಬೆಳೆಯಲಿಲ್ಲ.[೬] ೧೯೨೬ರಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ 'ಟ್ರೇಡ್ ಯೂನಿಯನ್ ಆಕ್ಟ್' ಜಾರಿಗೆ ಬಂದಿತು. ಆ ಆಕ್ಟ್‌ನಿಂದ ಚಳವಳಿಗಳು ನ್ಯಾಯಬದ್ಧವಾದವು. ಆದರೆ ಮೈಸೂರು ಸಂಸ್ಥಾನ ೧೯೪೧ರ ವರೆಗೂ ಅಂಥದೊಂದು ಶಾಸನವನ್ನು ಜಾರಿಗೆ ತರಲು ಬಲವಾಗಿ ನಿರಾಕರಿಸಿತು.[೭] ಇದರಿಂದ ಕಾರ್ಮಿಕ ಸಂಘಟನೆಯ ಮೇಲೆ ದುಷ್ಪರಿಣಾಮ ಉಂಟಾಯಿತು. ಇದೇ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಬೆಂಗಳೂರು, ಕೋಲಾರ, ಮುಂತಾದ ಸ್ಥಳಗಳಲ್ಲಿ ಕೈಗಾರಿಕೆಗಳು ಗರಿಗೆದರಿ ಕಾರ್ಮಿಕರ ಸಂಖ್ಯೆ ವೃದ್ಧಿಸಿದಾಗ ಅವರ ಮೇಲಾಗುತ್ತಿದ್ದ ಶೋಷಣೆ ಹಿನ್ನೆಲೆಯಲ್ಲಿ ಅವರೂ ಸಂಘಟನೆಯತ್ತ ತೆರಳಲೇಬೇಕಾಯಿತು. ಆದರೆ ಮೈಸೂರು ಸಂಸ್ಥಾನದಲ್ಲಿ ಕಾರ್ಮಿಕ ಸಂಘಟನೆಯನ್ನು ಹತ್ತಿಕ್ಕುವ ಕ್ರಮ ನಡೆಯಿತು. ಆಗಿನ ರೈಲ್ವೆ ಕಾರ್ಮಿಕ ಒಕ್ಕೂಟದ ಮಹಾಕಾರ್ಯದರ್ಶಿಯಾಗಿದ್ದ ವಿ.ವಿ.ಗಿರಿಯವರಿಗೆ ಮೈಸೂರನ್ನು ಪ್ರವೇಶಿಸದಂತೆ ಸರ್ಕಾರ ತಡೆಯಿತು. ಕಾರ್ಮಿಕ ಮುಖಂಡರೊಬ್ಬರು ಕಾರ್ಮಿಕರನ್ನು ಸಂಘಟಿಸಲು ಮುಂದಾದಾಗ

ಮೈಸೂರು ಸಂಸ್ಥಾನ ನಡೆದುಕೊಂಡ ರೀತಿಯಿಂದ ಅವರ ಅನಿಸಿಕೆಗಳು ಸ್ಪಷ್ಟವಾಗುತ್ತವೆ. ಕಾರ್ಮಿಕ ಸಮೂಹದಲ್ಲಿ ಹೋರಾಟದ ಭಾವನೆಗಳು ಬಲಗೊಳ್ಳತೊಡಗಿದಾಗ ಮೈಸೂರು ಸಂಸ್ಥಾನ ಕಾರ್ಮಿಕ ಕಾಯಿದೆಯನ್ನು ಜಾರಿಗೊಳಿಸಿತು. ೧೯೪೧ರ ಅಕ್ಟೋಬರ್‌ನಲ್ಲಿ ಮೈಸೂರು ಕಾರ್ಮಿಕ ತುರ್ತುಶಾಸನವು ಜಾರಿಯಾಗಿ ೧೯೪೨ರಲ್ಲಿ ಅದು ಕಾರ್ಮಿಕ ಕಾಯಿದೆಯಾಯಿತು. ಈ ಕಾಯಿದೆಯಿಂದ ಮೈಸೂರು ಸಂಸ್ಥಾನದಲ್ಲಿ ಸಂಘ ಸ್ಥಾಪನೆಗೊಂಡು, ಬೇಡಿಕೆಗಳನ್ನು ಮಂಡಿಸಿ ಮಾಲೀಕರೊಂದಿಗೆ ಚರ್ಚಿಸಲು ಅವಕಾಶ ಲಭ್ಯವಾಯಿತು. ಇಲ್ಲಿಂದ ಮುಂದೆ ಕಾರ್ಮಿಕ ಸಂಘಟನೆಗೆ ಬಲ ಬಂದು ವಿಕಸನವಾಯಿತು.

### ೪.೧. ಸಂಘದ ಸ್ಥಾಪನೆಯ ಹಿನ್ನೆಲೆ

ಬೆಂಗಳೂರಿನ ಕಾರ್ಮಿಕ ವರ್ಗವನ್ನು ಸಂಘಟಿಸಲು ಪ್ರಯತ್ನಿಸಿದ ನಾಯಕರೆಂದರೆ ರಾಮಶರ್ಮ ಹಾಗೂ ಕೆ.ಟಿ.ಭಾಷ್ಯಾಂ ಅವರು. ಮೊದಲನೆಯವರು ರಾಷ್ಟ್ರೀಯ ಚಳವಳಿಯಿಂದ ಪ್ರಭಾವಿತರಾಗಿದ್ದರೆ ಎರಡನೆಯವರು ಬದ್ಧ ಕಾಂಗ್ರೆಸ್ಸಿಗರು ಹಾಗೂ ಗಾಂಧೀವಾದಿಯಾಗಿದ್ದರು.[೮] ೧೯೨೦ರ ನಾಗಪುರ ಅಧಿವೇಶನದ ನಂತರ ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ರಚನೆಯಾದ ಬಳಿಕ ಮೈಸೂರಿನ ಕೆಲವು ರಾಷ್ಟ್ರೀಯ ವಾದಿಗಳು ಅಸಹಕಾರ ಚಳವಳಿಯಿಂದ ಪ್ರಭಾವಿತರಾಗಿ ಕಾರ್ಮಿಕರನ್ನು ಸಂಘಟಿಸಲು ಮುಂದಾದರು.[೯] ರಾಜಕೀಯ ಚಳವಳಿ ಹಾಗೂ ಸಾರ್ವಜನಿಕ ಕೆಲಸದಲ್ಲಿ ಕಾರ್ಮಿಕರು ಭಾಗವಹಿಸುವುದು ಎಷ್ಟು ಮುಖ್ಯವೆಂದು ಅವರಿಗೆ ಆ ವೇಳೆಗೆ ಮನವರಿಕೆಯಾಗಿತ್ತು. ಮೈಸೂರಿನ ವಿಚಾರದಲ್ಲಿ ಹೇಳುವುದಾದರೆ, ಕಾರ್ಮಿಕರ ಸಂಘಟನೆಗೆ ಸಂಬಂಧಿಸಿದಂತೆ ಇನ್ನೊಂದು ಆಯಾಮವಿದ್ದಿತು. ಸಂಖ್ಯೆಯಲ್ಲಿ ಅಧಿಕವಾಗಿದ್ದ ಬ್ರಾಹ್ಮಣೇತರರ ಪಕ್ಷದವರು ಕಾರ್ಮಿಕರನ್ನು ಸಂಘಟಿಸಲು ಹಿಂಜರಿದ ಕಾರಣ ಬ್ರಾಹ್ಮಣ ರಾಷ್ಟ್ರವಾದಿಗಳು ಅವರನ್ನು ಸಂಘಟಿಸಲು ಮುಂದಾದರು.[೧೦] ಏಕೆಂದರೆ ಬೆಂಗಳೂರು ಹಾಗೂ ಮೈಸೂರು ನಗರಗಳಲ್ಲಿ ಸಭೆಗಳು ಹಾಗೂ ಚಳವಳಿಗಳನ್ನು ನಡೆಸಲು ಅವರು ಹೆಚ್ಚು ಹೆಚ್ಚು ಕಾರ್ಮಿಕರ ಮೇಲೆ ಅವಲಂಬಿಸಬೇಕಾಗಿ ಬಂದಿತು. ಈ ವಿಷಯವಾಗಿ ಬ್ರಾಹ್ಮಣೇತರರಿಗೆ ಆಸಕ್ತಿಯಿಲ್ಲದ್ದರಿಂದ ವಿಶಾಲವಾದ ತಳಹದಿಯನ್ನು ಒದಗಿಸಲು ಕಾಂಗ್ರೆಸ್ ಪಕ್ಷವನ್ನು ಸಹ ಅವರು ಸೇರಲಿಲ್ಲ. ಸರ್ಕಾರ ಈ ಕಾರ್ಮಿಕ ಸಂಘಗಳಿಗೆ ಮಾನ್ಯತೆ ನೀಡಲು ನಿರಾಕರಿಸಿದ ಕಾರಣ ಆ ಕಾಲಾವಧಿಯ ಪೂರ್ತಿ ಮೈಸೂರಿನ ಕಾರ್ಮಿಕ ಸಂಘಟನೆಗಳು ದತ್ತಿಯ ಆಧಾರದ ಮೇಲೆ ತಮ್ಮ ಚಟುವಟಿಕೆಗಳನ್ನು ನಡೆಸುತ್ತಿದ್ದವು.

ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದ ಕಾಲದಲ್ಲಿ (೧೯೨೬–೪೧) ಸಂಸ್ಥಾನದಲ್ಲಿ ಸಾಕಷ್ಟು ಕೈಗಾರಿಕೆಗಳಿದ್ದರೂ ಕಾರ್ಮಿಕರ ಸ್ಥಿತಿ ನಿಕೃಷ್ಟವಾಗಿತ್ತು. ಕೆ.ಟಿ.ಭಾಷ್ಯಂ, ರಾಘವನ್

ಮುಂತಾದ ನಾಯಕರು ೧೯೨೦ರ ದಶಕದ ಆರಂಭದಿಂದಲೂ ಕಾರ್ಮಿಕ ಸಂಘಟನೆಗೆ ದುಡಿದರು. ಆದರೆ ಕಾರ್ಮಿಕ ಸಂಘಟನೆ ಮಾನ್ಯ ಮಾಡುವ ಕಾನೂನು ಮೈಸೂರಿನಲ್ಲಿ ಇರಲಿಲ್ಲವಾದ್ದರಿಂದ ಬೇರೆ ನಿಯಮಗಳಂತೆ ಅವುಗಳ ಸಂಘಟನೆ ನಡೆದಿತ್ತು. ಮಿರ್ಜಾ ಅವರು ಅಧಿಕಾರಕ್ಕೆ ಬಂದ ವರ್ಷವೇ ಬಿನ್ನಿಮಿಲ್ ಕಾರ್ಮಿಕರು 'ಬೋನಸ್'ಗಾಗಿ ತೀವ್ರ ಚಳವಳಿ ನಡೆಸಲು, ಆಗ ಗೋಲಿಬಾರ್ ಆಗಿ ನಾಲ್ಕು(೪) ಕಾರ್ಮಿಕರು ಸತ್ತರು. ಸರಕಾರ ಆ ಬಗ್ಗೆ ವಿಚಾರಣೆ ನಡೆಸಲು ಒಪ್ಪಲಿಲ್ಲ. ಕಾಂಗ್ರೆಸ್‌ನ ನಿರ್ಣಯದಂತೆ ಊರಿನ ಗಣ್ಯ ವಕೀಲರೇ ಬಹಿರಂಗವಾಗಿ ವಿಚಾರಣೆ ನಡೆಸಿ ಸರಕಾರದ ದಬ್ಬಾಳಿಕೆಯ ಕ್ರಮಗಳನ್ನು ಬಯಲಿಗೆಳೆದರು. ಆಗಿನ ಗಣ್ಯ ಪತ್ರಿಕೆಗಳಾದ ವಿಶ್ವಕರ್ನಾಟಕ, ತಾಯಿನಾಡು, ಚಿತ್ರಗುಪ್ತ, ನವಜೀವನ, ವೀರಕೇಸರಿಗಳು ಈ ವಿಚಾರಣೆಯ ವರದಿಗಳನ್ನು ವಿವರವಾಗಿ ಪ್ರಕಟಿಸಿ ಬಡಕಾರ್ಮಿಕರ ಪಕ್ಷವನ್ನು ಎತ್ತಿಹಿಡಿದು, ಕಾಂಗ್ರೆಸ್ ಜನಪ್ರಿಯವಾಗುವಂತೆ ಮಾಡಿದವು.[೧೧] ಮುಂದೆ ಕಾರ್ಮಿಕರ ಸಂಘಟನೆ ಕಾಂಗ್ರೆಸ್‌ನ ಬೆನ್ನೆಲಬಾಗಿ ೧೯೪೨ ರ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಗಣ್ಯ ಪಾತ್ರವಹಿಸುವಂತಾಯಿತು. ಇಲ್ಲಿ ಹೇಳಬಯಸುವ ವಿಷಯವೆಂದರೆ ಬಿನ್ನಿಮಿಲ್ ಅಥವಾ ಇನ್ನಾವುದೇ ಮಿಲ್‌ನ ಕಾರ್ಮಿಕರನ್ನು ಸಂಘಟಿಸುವಲ್ಲಿ ಕಾಂಗ್ರೆಸ್‌ನ ಪಾತ್ರ ಪ್ರಮುಖವಾದುದು. ಕಾರ್ಮಿಕ ಸಂಘಟನೆಯ ಕಾರ್ಯಾಚರಣೆಯು ಒಂದು ರೀತಿಯಲ್ಲಿ ಕಾಂಗ್ರೇಸ್ ಕಾರ್ಯಾಚರಣೆಯೇ ಆಗಿದ್ದಿತು. ಈ ಸಂಘಟನೆಗಳು ಸ್ವತಂತ್ರ ನಿರ್ಧಾರವನ್ನು ತೆಗೆದುಕೊಳ್ಳುವ ಸಾಮರ್ಥ್ಯ ಪಡೆದಿರಲಿಲ್ಲ. ಸಂಘಟನೆಯ ಎಲ್ಲಾ ವಿಚಾರಗಳಲ್ಲಿಯೂ ಕಾಂಗ್ರೆಸ್‌ನ ಹಸ್ತಕ್ಷೇಪ ಇದ್ದೇ ಇರುತ್ತಿತ್ತು. ಕಾಂಗ್ರೆಸ್‌ನ ಪ್ರಮುಖ ಉದ್ದೇಶ ಸಂಘಟನೆಯ ಹಿತಾಸಕ್ತಿಯನ್ನು ಕಾಪಾಡುವುದಾಗಲೀ ಅಥವಾ ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸುವುದಾಗಲೀ ಆಗಿರದೆ ಕೇವಲ ಕಾರ್ಮಿಕರನ್ನು ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಳ್ಳುವಂತೆ ಮಾಡುವುದಾಗಿತ್ತು. ಇದು ಕಾಂಗ್ರೆಸ್‌ನ ತಂತ್ರವೂ ಆಗಿದ್ದಿತು ಎಂದರೆ ತಪ್ಪಾಗಲಾರದು.

೧೯೨೧ರಲ್ಲಿ 'ದ ಬಿನ್ನಿ ಮಿಲ್ ವೆಲ್‌ಫೇರ್ ಕಮಿಟಿ' (The Binny Mill Welfare Committee) ಪ್ರಾರಂಭವಾಯಿತು.[೧೨] ಇದು ಕಾರ್ಮಿಕರಿಗೆ ಬೋನಸ್ ಕೊಡಿಸುವ ವಿಷಯವಾಗಿ, ಇತರೆ ಡಿವಿಡೆಂಟ್ ಬರಿಸುವ ವಿಷಯವಾಗಿ ತನ್ನ ಕಾರ್ಯ ಮಡುತ್ತಿತ್ತು. ಇದು ಕಾರ್ಮಿಕರನ್ನಲ್ಲದೆ ಇಡೀ ಮಿಲ್‌ನ ಗುಮಾಸ್ತರು, ಮೇಸ್ತ್ರಿಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಲು ಯಶಸ್ವಿಯಾಗಿತ್ತು. ಕಾರ್ಮಿಕ ಸಂಘಟನೆಗಳು ಮೊದಲಿನಿಂದ ಹೋರಾಟಕ್ಕೆ ಬದ್ಧರಾಗಿದ್ದರೂ, ಅವು ಹೆಚ್ಚು ಕ್ರಿಯಾಶೀಲ ವಾದುದು ೧೯೩೦–೩೫ರ ಸಮಯದಲ್ಲಿ ಬಿನ್ನಿಮಿಲ್ ಕಾರ್ಮಿಕ ಸಂಘ ಅದಾಗಲೇ ಬಲಿತು ಬೆಳೆದಿತ್ತು. ಅದೇ ರೀತಿ ಇತರೆ ಕಾರ್ಖಾನೆ, ಮಿಲ್‌ಗಳಲ್ಲಿ ಕಾರ್ಮಿಕ ಸಂಘಗಳು ಹುಟ್ಟಿ, ತಮ್ಮ ವರ್ಗದವರ ಹಕ್ಕು ಬಾಧ್ಯತೆಗಳ ಜೊತೆಗೆ ಸ್ವಾತಂತ್ರ್ಯ ಹೋರಾಟಕ್ಕಾಗಿಯೂ ಶ್ರಮಿಸಿದರು. ಮಿಲ್ ಕಾರ್ಮಿಕರ ಹಿತಕ್ಕಾಗಿ ಎಂ.ಎ.ಪರುಶುರಾಮ ಎಂಬ ಕಾರ್ಮಿಕ

ಮುಂದಾಳು"ದರಿದ್ರನಾರಾಯಣ ಸೇವಾ ಸಂಘವನ್ನು" ಸ್ಥಾಪಿಸಿದರು.[೯೩] ಇದರ ಮೂಲಕ ಕಾಂಗ್ರೆಸ್‌ನ ಧ್ಯೇಯಗಳನ್ನು ಮತ್ತು ಸ್ವಾತಂತ್ರ್ಯ ಹೋರಾಟದ ವಿಚಾರಗಳನ್ನು ಕಾರ್ಮಿಕರಿಗೆ ತಿಳಿಹೇಳಲೂ, ಕಾರ್ಮಿಕರ ತೊಂದರೆಗಳನ್ನು ದೊಡ್ಡಪಟಲದ ಮೇಲೆ ಚಿತ್ರಿಸಲೂ ಅನುಕೂಲವಾಯಿತು. ಸರ್ಕಾರದವರು ಇವರನ್ನು ೧೯೩೯, ೪೦, ೪೧, ೪೪ರಲ್ಲಿ ನಾಲ್ಕು ಬಾರಿ ಉಚ್ಛಾಟನೆ ಮಾಡಿದರೂ ಇವರ ಛಲವನ್ನು ಮಾತ್ರ ಹತ್ತಿಕ್ಕಲಾಗಲಿಲ್ಲ.

೧೯೨೬ರಲ್ಲಿ ಜರುಗಿದ ಬಿನ್ನಿಮಿಲ್‌ನ ಬೋನಸ್ ನೀಡಿಕೆಯ ಕುರಿತಾದ ಮುಷ್ಕರದ ಪರಿಣಾಮವಾಗಿ ಕಾರ್ಮಿಕರಿಗೆ ತಮ್ಮ ಬೇಡಿಕೆಗಳನ್ನು ವ್ಯವಸ್ಥಿತ ರೀತಿಯಲ್ಲಿ ಅಭಿವ್ಯಕ್ತಿಸಲು ಒಂದು ಸಂಘದ ಅವಶ್ಯಕತೆ ಇದೆ ಎಂದು ಮನಗೊಂಡರು. ಮಾಲೀಕನಾಗಿದ್ದ ನೀಲಗಿರಿ ಸಂಜೀವಯ್ಯ ಇವರು ಕಾರ್ಮಿಕರ ಹಂಬಲಕ್ಕೆ ಸಂವೇದಿಸಿ 'ಬೆಂಗಳೂರು ಟೆಕ್ಸ್‌ಟೈಲ್ಸ್ ಲೇಬರ್ ಯೂನಿಯನ್' ಸ್ಥಾಪಿಸಿದರು.[೯೪] ಇದನ್ನು ಮೈಸೂರು ರಾಜ್ಯದ ಅಧಿಕಾರಿಗಳು ಸ್ವಾಗತಿಸಿದರು. ಈ ಕಾಲಾವಧಿಯಲ್ಲಿ ಟ್ರೇಡ್ ಯೂನಿಯನ್ ಅನ್ನು ಒಂದು ಧಾರ್ಮಿಕ ಸಂಸ್ಥೆಯಾಗಿ ನೊಂದಾಯಿಸಲಾಗುತ್ತಿತ್ತು.[೯೫]

೧೯೨೦ರ ವರ್ಷಗಳಲ್ಲಿ ಕೆ.ಟಿ.ಭಾಷ್ಯಂ, ಪಿ.ಎಂ.ರಾಮಶರ್ಮ ಮತ್ತು ಕೆ.ಸಿ.ರೆಡ್ಡಿ ಇಂತಹ ನಾಯಕರು ಮುಂದೆ ಬಂದು, ಮೈಸೂರಿನಲ್ಲಿ ಕಾರ್ಮಿಕರನ್ನು ಸಂಘಟಿಸುವುದರಲ್ಲಿ ರಾಷ್ಟ್ರೀಯ ಆಸಕ್ತಿ ಸ್ಪಷ್ಟವಾಗಿತ್ತು. ೧೯೨೭ರ ನಂತರ ಭಾಷ್ಯಂ ಮತ್ತು ರಾಮಶರ್ಮ ಬೆಂಗಳೂರು ಟೆಕ್ಸ್‌ಟೈಲ್ಸ್ ಲೇಬರ್ ಯೂನಿಯನ್ ಅಧ್ಯಕ್ಷರು ಮತ್ತು ಕಾರ್ಯದರ್ಶಿ ಆಗಿ ಎಲ್ಲಾ ಟೆಕ್ಸ್‌ಟೈಲ್ಸ್ ಮಿಲ್ಲುಗಳ ಕಾರ್ಮಿಕರು ಈ ಯೂನಿಯನ್ನಿನ ಸದಸ್ಯರಾಗುವಂತೆ ಮಾಡಲು ಬಹುವಾಗಿ ಶ್ರಮಿಸಿದರು. ಕಾಂಗ್ರೆಸ್ ನಾಯಕರು ಬಿನ್ನಿಮಿಲ್, ಮಹಾರಾಜ ಮಿಲ್ ಅಥವಾ ಮಿನರ್ವಾ ಮಿಲ್ ಇಂತಹ ದೊಡ್ಡ ಸ್ಥಾವರಗಳ ಪರವಾಗಿದ್ದರೆ ಹೊರತು ಸಣ್ಣ ಪ್ರಮಾಣದ ಮಿಲ್‌ಗಳ ಕಡೆಗೆ ಅಷ್ಟಾಗಿ ಒತ್ತು ಕೊಡಲಿಲ್ಲ. ಅವುಗಳಲ್ಲಿ ಹಲವನ್ನು ಕಾಂಗ್ರೆಸ್ ಸದಸ್ಯರೇ ನಡೆಸುತ್ತಿದ್ದರು.[೯೬] ಬಿನ್ನಿಮಿಲ್, ಮಹಾರಾಜ ಮತ್ತು ಮಿನರ್ವಾ ಮಿಲ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕಾರ್ಮಿಕರ ಒಟ್ಟು ಸಂಖ್ಯೆ ಆ ಕಾಲಕ್ಕೆ ೮೦೦೦ಕ್ಕೂ ಅಧಿಕವಾಗಿದ್ದಿತು. ಹೀಗಾಗಿ ಈ ದೊಡ್ಡ ಕರ್ಖಾನೆಗಳ ಕಡೆಗೆ ಕಾಂಗ್ರೆಸ್‌ನ ಗಮನ ಹರಿದದ್ದು ಸಾಮಾನ್ಯ. ಅಲ್ಲದೆ ಇವರನ್ನು ಸ್ವಾತಂತ್ರ್ಯ ಚಳವಳಿಗೆ ಬಳಸಿಕೊಂಡು ಅದನ್ನು ಪರಿಣಾಮಕಾರಿಯಾಗಿಸುವ ಉದ್ದೇಶ ಕಾಂಗ್ರೆಸಿನದಾಗಿತ್ತು.

ಅಂತೆಯೇ ೧೯೨೦ರಲ್ಲಿ ಬೋನಸ್ ವಿಷಯವಾಗಿ ನಡೆದ ಮುಷ್ಕರದಲ್ಲಿ ದೊರೆತ ಜಯ ಕಾರ್ಮಿಕ ಸಂಘಟನೆಗಳ ಬಗ್ಗೆ ಕಾರ್ಮಿಕರಲ್ಲಿ ನಂಬಿಕೆ ಹುಟ್ಟುಸಿತು. ೧೯೨೦ ರಲ್ಲಿ 'ಬಿನ್ನಿಮಿಲ್ ವರ್ಕರ್ಸ್ ಕೌನ್ಸಿಲ್' ಪ್ರಾರಂಭವಾಯಿತು.[೯೭] ನಂತರ ಇದೇ ಮಾದರಿಯ ಸಂಘಟನೆಗಳು

ಮಿನರ್ವ ಹಾಗೂ ಕೃಷ್ಣ ಮಿಲ್ಸ್‌ಗಳಲ್ಲಿ ಕೂಡ ಪ್ರಾರಂಭವಾದವು. ಒಟ್ಟಾರೆ ಎರಡು ಮಹಾಯುದ್ಧಗಳ ನಡುವೆ ನಡೆದ ಕಾರ್ಮಿಕ ಚಟುವಟಿಕೆಗಳು ಕಾರ್ಮಿಕ ಸಂಘಟನೆಗಳು ಪ್ರಾರಂಭವಾಗುವುದಕ್ಕೆ ಕಾರಣವಾಯಿತು.

೧೯೪೦ರಲ್ಲಿ ಬಿನ್ನಿಮಿಲ್‌ನಲ್ಲಿ ೨೧ ದಿನಗಳ ವರೆಗೆ ಮುಷ್ಕರವಾಯಿತು. ಕೆ.ಟಿ.ಭಾಷ್ಯಂ ಮುಂತಾದ ಕಾರ್ಮಿಕ ನಾಯಕರ ಬಂಧನವಾಯಿತು. ಫೆಬ್ರವರಿ ೨೫ ಕ್ಕೆ ಈ ಮುಷ್ಕರ ನಿಂತು ಒಪ್ಪಂದಕ್ಕೆ ಅನುಕೂಲವಾಗುವಂತೆ ಸಮಿತಿಯೊಂದನ್ನು ಸರ್ಕಾರ ರಚಿಸಿತು. ಕೈಗಾರಿಕೆಗಳಲ್ಲಿ ಶಾಂತಿ ಕಾಯ್ದುಕೊಂಡು ಬರಲು ಅನುಕೂಲವಾಗುವಂತೆ ಸೂತ್ರವೊಂದನ್ನು ರಚಿಸುವ ಜವಾಬ್ದಾರಿಯನ್ನು ಈ ಸಮಿತಿಗೆ ಒಪ್ಪಿಸಲಾಯಿತು. ಈ ಸಮಿತಿ ನೀಡಿದ ಸಲಹೆಗಳ ಆಧಾರದ ಮೇಲೆ ವಿವಾದ ಪರಿಹಾರ ಹಾಗೂ ಒಪ್ಪಂದದ ವಿಧಿಗಳನ್ನೊಳಗೊಂಡ ಮೈಸೂರು ಕಾರ್ಮಿಕ (ತುರ್ತು ಸ್ಥಿತಿ) ಕಾಯಿದೆಯನ್ನು ಸರ್ಕಾರ ೧೯೪೧ರಲ್ಲಿ ಜಾರಿಗೊಳಿಸಿತು. ಏಕೆಂದರೆ ಮಹಾಯುದ್ಧದ ಕಾಲದಲ್ಲಿ ಉತ್ಪಾದನೆ ನಿಲ್ಲಬಾರದೆಂದು ಬೆದರಿ ಸರಕಾರ ಈ ಕ್ರಮ ಕೈಗೊಂಡಿತು. ಬ್ರಿಟಿಷ್ ಪ್ರಾಂತ್ಯಗಳಲ್ಲಿ ಈ ಮಾನ್ಯತೆ ೧೯೨೬ರಲ್ಲೇ ದೊರಕಿತ್ತು.[೧೮] ಒಂದು ವೇಳೆ ಮುಷ್ಕರದಿಂದ ಉತ್ಪಾದನೆ ಏನಾದರು ನಿಂತರೆ, ಬ್ರಿಟನ್, ಯುದ್ಧದಲ್ಲಿ ತ್ಮಮ ಸೈನಿಕರಿಗೆ ಬಟ್ಟೆಯನ್ನು ಪೂರೈಕೆಮಾಡಲು ಭಾರತದ ಕೈಗಾರಿಕೆಗಳನ್ನು ನಂಬಿಕೊಂಡಿದ್ದು, ಇದರಿಂದ ತಮಗೆ ತೊಂದರೆಯಾಗುತ್ತದೆಂದು ಭಾವಿಸಿ ಕಾರ್ಮಿಕ ಕಾಯಿದೆಗೆ ಅನುಮತಿ ಕೊಟ್ಟಿತು. ಎನ್.ಡಿ.ಶಂಕರ್, ಕೆ.ಎಸ್.ಕುಮಾರನ್, ಎಂ.ಎಸ್.ರಾಮರಾವ್ ಈ ಮುಷ್ಕರದ ಯಶಸ್ಸಿಗೆ ಕಾರಣರಾದ ನಾಯಕರು.

### ೪.೨. ಸ್ವಾತಂತ್ರ್ಯ ಚಳವಳಿಗೆ ಇವರ ಕೊಡುಗೆ

ರಾಷ್ಟ್ರಮಟ್ಟದಲ್ಲಿ ಗೌರವಾನ್ವಿತರಾಗಿದ್ದ ಅನೇಕ ಮುಖಂಡರು ಬೆಂಗಳೂರಿಗೆ ಭೇಟಿಕೊಟ್ಟು ಜನರನ್ನು ಬಡಿದೆಬ್ಬಿಸಿದರು. ಇವರಲ್ಲಿ ಮುಖ್ಯರಾದ ಕೆಲವರು–ಬ್ರಹ್ಮ ಸಮಾಜದ ಪಂಡಿತ್ ಶಿವನಾಥ ಶಾಸ್ತ್ರಿ ಮತ್ತು ವೀರೇಶ ಲಿಂಗಮ್ ಪಂತಲು (೧೮೮೦), ಅನಿಬೆಸೆಂಟ್ (೧೯೧೬), ರಬೀಂದ್ರನಾಥ್ ಠಾಕೂರ್ (೧೯೧೯), ಸರೋಜಿನಿ ನಾಯ್ಡು (೧೯೨೦), ಮದನ ಮೋಹನ ಮಾಳವೀಯಾ (೧೯೨೭), ಸಿ.ರಾಜಗೋಪಾಲಚಾರಿ (೧೯೨೭), ಮಹಾತ್ಮಗಾಂಧಿ, ಜವಹರ್‌ಲಾಲ್ ನೆಹರು (೧೯೩೧), ಗಾಂಧೀಜಿಯಂತೂ ೧೯೧೫, ೧೯೨೦, ೧೯೨೭ರಲ್ಲಿ ಇಲ್ಲಿಗೆ ಬಂದದ್ದೇ ಅಲ್ಲದೆ ೧೯೨೭ರಲ್ಲಿ ಬೆಂಗಳೂರು ಮತ್ತು ನಂದೀಬೆಟ್ಟದಲ್ಲಿ ನಾಲ್ಕು ತಿಂಗಳು ಇದ್ದರು. ೧೯೧೫ರಲ್ಲಿ ಬಂದಾಗ ಗೋಪಾಲಕೃಷ್ಣ ಗೋಖಲೆಯವರ ಚಿತ್ರಪಟವನ್ನು ಅನಾವರಣ ಮಾಡಿ ಮಾತಾಡಿದ್ದರು. ಜೂನ್ ೧೯೨೭ರಲ್ಲಿ ಗಾಂಧೀಜಿ ಕುಮಾರಕೃಪದಲ್ಲಿ ತಂಗಿದ್ದಾಗ ಪ್ರತಿ ಸಂಜೆಯೂ ಪ್ರಾರ್ಥನಾ ಸಭೆಗಳನ್ನು ನಡೆಸಿದರು. ಈ ಸಭೆಗಳಿಗೆ ಅನೇಕ ಹಿರಿಯರು, ವಿದ್ಯಾರ್ಥಿಗಳು

ಬರುತ್ತಿದ್ದರು. ಬಂದವರೆಲ್ಲಾ ಖಾದೀ ಉಡುಪನ್ನೇ ಧರಿಸಬೇಕೆಂಬುದು ಗಾಂಧೀಜಿಯವರ ಒತ್ತಾಯವಾಗಿತ್ತು. ಒಟ್ಟಿನಲ್ಲಿ ಗಾಂಧೀಜಿಯ ದೀರ್ಘವಾಸದಿಂದ ಬೆಂಗಳೂರಿನಲ್ಲಿ ಖಾದಿಯ ಅಭಿವೃದ್ಧಿಗೆ ಸಾಕಷ್ಟು ಪ್ರೋತ್ಸಾಹ ಸಿಕ್ಕಿತಲ್ಲದೆ, ರಾಷ್ಟ್ರೀಯ ಚಳವಳಿಗೆ ಸೂಕ್ತ ಪರಿಸರ ನಿರ್ಮಿತವಾಯಿತು.[೧೯] ಈ ಮೇಲಿನ ಸುಧಾರಕರು ಬಿನ್ನಿಮಿಲ್‌ನೊಂದಿಗೆ ನೇರ ಸಂಪರ್ಕ ಹೊಂದಿರಲಿಲ್ಲ. ಆದರೆ ಇವರುಗಳು ಬೆಂಗಳೂರಿಗೆ ಬಂದಿದ್ದರಿಂದ ಇಲ್ಲಿನ ಜನರು ಹಾಗೂ ಕಾರ್ಮಿಕರ ಮೇಲೆ ಇವರ ವಿಚಾರಗಳ ಪ್ರಭಾವ ಆಗಿರುವುದಂತೂ ಖಂಡಿತ. ಅಲ್ಲದೆ ಗಾಂಧೀಜಿಯ ಖಾದಿ ಪ್ರಚಾರದ ಉದ್ದೇಶದ ಹಿಂದೆಯೂ ಬಿನ್ನಿಮಿಲ್‌ನ ಯಶಸ್ಸು ಅಡಗಿತ್ತು ಎಂದರೂ ತಪ್ಪಾಗಲಾರದು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ೧೯೩೧ರಲ್ಲಿ ಬೆಂಗಳೂರಿನ ಸ್ವದೇಶಿ ಅಂಗಡಿಯನ್ನು ಉದ್ಘಾಟಿಸಲು ಜವಹರ್‌ಲಾಲ್ ನೆಹರೂ, ಪತ್ನಿ ಮತ್ತು ಮಗಳ ಸಮೇತ ಬಂದರು. ಆಗ ಧರ್ಮಾಂಬುಧಿ ಕೆರೆಯ ಮೈದಾನದಲ್ಲಿ ಅವರು ಹಾರಿಸಿದ ತ್ರಿರಂಗ ಧ್ವಜವನ್ನು ಸರ್ಕಾರ ಕೆಳಗಿಳಿಸಿದಾಗ ಗಲಾಟೆಯಾಯಿತು. ಕೆ.ಟಿ.ಭಾಷ್ಯಂ ನಿರಶನವ್ರತ ಶುರುಮಾಡಿದರು. ಬಿನ್ನಿಮಿಲ್‌ನ ಕಾರ್ಮಿಕ ವರ್ಗದವರು ಮುಖ್ಯ ಪಾತ್ರವಹಿಸಿ ರಾತ್ರೋರಾತ್ರಿ ಬಾವುಟವನ್ನು ಅಲ್ಲೇ ಹಾರಿಸಿದ ಮೇಲೆ ಕೆ.ಟಿ.ಭಾಷ್ಯಂ ಉಪವಾಸ ಸತ್ಯಾಗ್ರಹವನ್ನು ಹಿಂತೆಗೆದುಕೊಂಡರು.[೨೦] ೧೯೩೧ ರ ಕರಾಚಿ ಕಾಂಗ್ರೆಸ್ ಸಭೆಗೆ ಕೆ.ಟಿ.ಭಾಷ್ಯಂ, ಎಸ್.ಆರ್.ಎಸ್.ರಾಘವನ್ ಅಲ್ಲದೆ ಇನ್ನು ಅನೇಕರು ನಗರದಿಂದ ಹೋಗಿದ್ದರು. ನೆಹರೂರ ಭೇಟಿ ಮತ್ತು ಭಾಷಣದಿಂದ ಸ್ಫೂರ್ತಿ ಹೊಂದಿದ ಕಂಟೋನ್ಮೆಂಟ್ ಪ್ರಜೆಗಳು 'ನೆಹರೂ ಸೇವಾ ಸಂಘಮ್' ಮತ್ತು 'ಗಾಂಧೀ ಚರಕಾ ಸಂಘಮ್' ಅನ್ನು ಸ್ಥಾಪಿಸಿ ತಾವೂ ರಾಷ್ಟ್ರೀಯ ಚಳವಳಿಯಲ್ಲಿ ಭಾಗಿಗಳಾದರು.[೨೧] ಜವಾಬ್ದಾರಿ ಸರ್ಕಾರಕ್ಕಾಗಿ ಚಳವಳಿ ನಡೆದಾಗ ಮಿಲ್‌ಗಳ ಪಾತ್ರ ಬಹಳ ಮುಖ್ಯವಾದುದು. ಮಹಾರಾಜರುಗಳು ಆಳುತ್ತಿದ್ದ ಸಂಸ್ಥಾನೀ ಪ್ರದೇಶಗಳಲ್ಲಿ ಯಾವುದೇ ಕಾನೂನು ಭಂಗ ಚಳವಳಿ ಮಾಡಬಾರದು, ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಮಾತ್ರ ಕಾಂಗ್ರೆಸ್ ಸೂಚಿಸಿದಾಗ ಚಳವಳಿ ಮಾಡಬೇಕು ಎಂಬುದು ಗಾಂಧೀಜಿಯವರ ಆದೇಶವಾಗಿತ್ತು.[೨೨] ಹೀಗಾಗಿ ಕಂಟೋನ್ಮೆಂಟ್ ಪ್ರದೇಶ ಬಿಟ್ಟು ಉಳಿದೆಡೆ ೧೯೨೧-೨೨ ರಲ್ಲಾಗಲೀ (ಅಸಹಕಾರ ಪರ್ವ), ೧೯೩೦-೩೪ರ ನಡುವಿನ ಕಾನೂನು ಭಂಗ ಚಳವಳಿಯಲ್ಲಾಗಲೀ ಸಂಸ್ಥಾನದಲ್ಲಿ ಯಾವುದೇ ಸತ್ಯಾಗ್ರಹ ನಡೆದಿರಲಿಲ್ಲ. ಇಲ್ಲಿ ಅಂದರೆ ಕಂಟೋನ್ಮೆಂಟ್ ಪ್ರದೇಶದಲ್ಲಿ ಗಾಂಧೀಜಿಯ ಪ್ರಭಾವ ಕಡಿಮೆ ಇತ್ತು ಎಂತಲೇ ಹೇಳಬಹುದು. ಹೀಗಾಗಿ ಮಿಲ್‌ನ ಕಾರ್ಮಿಕರು ಮತ್ತು ಸಂಘಟನೆ ಚಳವಳಿಯಲ್ಲಿ ಭಾಗಿಯಾಗಲು ಸಾಧ್ಯವಾಯಿತು. ಆದರೆ ಇಲ್ಲಿ ನೆಹರೂರವರ ಪ್ರಭಾವ ಹೆಚ್ಚಾಗಿಯೇ ಇದ್ದು, ಅವರ ಚಿಂತನೆಗಳಿಗೆ ಬೆಂಬಲವೂ ಸಹ ಸಿಕ್ಕಿತು. ಹೀಗಾಗಿಯೇ ೧೯೩೧ರಲ್ಲಿ ಜವಹರ್‌ಲಾಲ್ ನೆಹರೂ ಬೆಂಗಳೂರಿಗೆ

ಬಂದಾಗ ಸ್ವದೇಶೀ ವಸ್ತು ಮಾರಾಟ ಮಳಿಗೆ ಆರಂಭಿಸಿದ್ದು. ಆದರೆ ಕಾಂಗ್ರೆಸ್ಸಿನ ಜವಾಬ್ದಾರಿ ಸರಕಾರದ ಬೇಡಿಯನ್ನು ಪ್ರಜಾಮಿತ್ರ ಮಂಡಳಿಯನ್ನು ಸ್ಥಾಪನೆ ಮಾಡುವುದರ ಮೂಲಕ ಬ್ರಾಹ್ಮಣೇತರ ಹಿಂದುಳಿದವರೂ, ಮುಸಲ್ಮಾನರೂ ವಿರೋಧಿಸಿದರು. ಅಲ್ಲದೆ ಇವರುಗಳಿಗೆ ಕಾರ್ಖಾನೆಯ ಕಾರ್ಮಿಕರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಹೀಗಾಗಿ ಮೇಲ್ವರ್ಗದ ಬ್ರಾಹ್ಮಣರು ಕಾರ್ಮಿಕರ ಪರ ನಿಂತು ಇವರನ್ನು ಚಳವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿದರು. ಕಾರ್ಮಿಕರ ಆಗಮನದಿಂದ ಚಳವಳಿ ಹೊಸ ರೂಪವನ್ನು ಪಡೆದುಕೊಂಡಿತು. ಆದರೆ ಬ್ರಾಹ್ಮಣೇತರರು ಇದರಿಂದ ದೂರವಾಗಿಯೇ ಉಳಿದರು. ಕಮ್ಯೂನಿಷ್ಟರ ವಿಚಾರದಲ್ಲಿಯೂ ಇದೇ ಆಗಿದ್ದು. ಕಾರ್ಮಿಕರು ಇರುವವರೆಗೂ ಇವರ ಚಳವಳಿ ಪರಿಣಾಮಕಾರಿಯಾಗಿದ್ದಿತು. ಆದರೆ ಇವರನ್ನು ಕಡೆಗಣಿಸಿದ ನಂತರ ಕಮ್ಯೂನಿಷ್ಟ್ ತನ್ನ ಬಲವನ್ನು ಕಳೆದುಕೊಂಡಿತು.

ಕ್ವಿಟ್ ಇಂಡಿಯಾ ಚಳವಳಿ (೧೯೪೨) ಅಥವಾ ಭಾರತ ಬಿಟ್ಟು ತೊಲಗಿ (ಚಲೇಜಾವ್) ಎಂಬ ಗಾಂಧೀಜಿಯವರ ಘೋಷಣೆ ಆಗಸ್ಟ್ ೮ ರಾತ್ರಿ ಮುಂಬಯಿಯಲ್ಲಿ ಮೊಳಗಿದಾಗ ಅವರ ಮತ್ತು ಇತರ ನೆಹರೂ, ಆಜಾದ್ ಮುಂತಾದ ಎಲ್ಲಾ ಗಣ್ಯ ಕಾಂಗ್ರೆಸ್ ನಾಯಕರ ಬಂಧನವಾಯಿತು. ಆಗಸ್ಟ್ ೯, ಭಾನುವಾರ ದೇಶದ ಎಲ್ಲಾ ನಗರ, ಪಟ್ಟಣಗಳಿಗೆ ಕಾಳ್ಗಿಚ್ಚಿನಂತೆ ಈ ಕರೆ ಮತ್ತು ಬಂಧನದ ಸುದ್ದಿ ಹರಡಿ ಮುಂದಿನ ಎರಡು ಮೂರು ದಿನಗಳಲ್ಲಿ ಹಳ್ಳಿಹಳ್ಳಿಗಳಲ್ಲೂ ಜನರ ಕ್ರೋಧ ಭುಗಿಲೆದ್ದಿತು. ಮೈಸೂರು ಸಂಸ್ಥಾನದಲ್ಲೂ ಹಿಂದಿಗಿಂತಲೂ ಹೆಚ್ಚು ಉಗ್ರವಾಗಿ, (ಜವಬ್ದಾರಿ ಸರಕಾರದ ಬೇಡಿಕೆ ಈ ಸಂದರ್ಭಕ್ಕೆ ಮೂಲೆಗುಂಪಾಯಿತು) 'ಕ್ವಿಟ್ ಇಂಡಿಯಾ' ಎಂಬ ಬ್ರಿಟಿಷರ ವಿರುದ್ಧವಾದ ಕೂಗು ಎಲ್ಲೆಡೆ ಮಾರ್ದನಿಗೊಂಡಿತು.

ಬನಪ್ಪಾ ಪಾರ್ಕಿನಲ್ಲಿ ಆ.೯ರ ಮಧ್ಯಾಹ್ನ ನಡೆದ ಸಭೆಯಲ್ಲಿ ೧೨,೦೦೦ ವಿದ್ಯಾರ್ಥಿಗಳು ಇದ್ದರೆಂದು ಸರಕಾರಿ ವರದಿ ಹೇಳುತ್ತದೆ. ಗಾಂಧೀಜಿಯ ಬಿಡುಗಡೆ ಆಗುವವರೆಗೆ ಮುಷ್ಕರ ಮುಂದುವರಿಸಬೇಕೆಂದು ಇಲ್ಲಿ ಠರಾವಾಗಿ ಕೆ.ವಿ.ವಸಂತಯ್ಯ, ದೀನದಯಾಳು ನಾಯ್ಡು, ಕೆ.ಕೃಷ್ಣಮೂರ್ತಿ ಮುಂತಾದ ವಿದ್ಯಾರ್ಥಿ ನಾಯಕರು ಭಾಷಣ ಮಾಡಿದರು. ಮರುದಿನ (೧೧.೮.೪೨) ಸೆಂಟ್ರಲ್ ಕಾಲೇಜ್ ಕ್ರಿಕೆಟ್ ಪೆವಿಲಿಯನ್‌ನಲ್ಲಿ ನಡೆದ ವಿದ್ಯಾರ್ಥಿಗಳ ಸಭೆಗೂ ೧೨,೦೦೦ ಜನ ಹಾಜರಿದ್ದರು. ಒಂದೇ ದಿನದಲ್ಲಿ ನಗರದ ಎಲ್ಲಾ ಗೋಡೆಗಳಲ್ಲಿ 'ಕ್ವಿಟ್ ಇಂಡಿಯಾ' ಮುಂತಾದ ಬ್ರಿಟಿಷ್ ವಿರೋಧಿ ಘೋಷಣೆಗಳು ಕಾಣಿಸಿದವು. ಆ ದಿನವೇ ಬಿನ್ನಿಮಿಲ್, ಮಿನರ್ವಾ ಮಿಲ್ ಕಾರ್ಮಿಕರೂ ಮುಷ್ಕರ ಹೂಡಿ, ಬನಪ್ಪಾ ಪಾರ್ಕಿನಲ್ಲಿ ಭಾರಿ ಸಭೆ ನಡೆಯಿತು. ಹೊಸಕೋಟೆ ಮಹಾದೇವ ಶಾಸ್ತ್ರಿಯವರು ಅಧ್ಯಕ್ಷತೆವಹಿಸಿದ್ದ ಈ ಸಭೆಯಲ್ಲಿ ಕಾಂಗ್ರೆಸ್ ಸೂಚಿಸಿದ ೧೩ ಅಂಶಗಳ ಕಾರ್ಯಕ್ರಮವನ್ನು ಕೆ. ರಾಮಸ್ವಾಮಿ ಓದಿ ಹೇಳಿದರು.[೨೪]

ಆಗಸ್ಟ್ ೯, ೧೦ ಮತ್ತು ೧೧ (೧೯೪೨)ನೇ ತಾರೀಖು ಬನಪ್ಪಾ ಪಾರ್ಕ್, ಸ್ವಾತಂತ್ರ್ಯ ಚಳವಳಿ ಅಥವಾ ಕ್ವಿಟ್ ಇಂಡಿಯಾ ಚಳವಳಿಯ ಕೇಂದ್ರವಾಗಿ ಮಾರ್ಪಟ್ಟಿತು.

ಆಗಸ್ಟ್ ೧೨ರಂದು ಮೈಸೂರು ನೂಲು ಗಿರಿಣಿ ನೌಕರರು ಗಿರಿಣಿಯ ಒಳಗೇ ಕೂತು ಮುಷ್ಕರ ಹೂಡಿದರೆ ಬಿನ್ನಿಮಿಲ್, ಸರಕಾರೀ ಮುದ್ರಣಾಲಯ, ಆಮ್ಕೋ ಬ್ಯಾಟರಿ ಕಾರ್ಖಾನೆಗಳ ಕಾರ್ಮಿಕರು ಹೊರನಡೆದು ಮುಷ್ಕರ ಹೂಡಿದರು. ಹಿಂದೂಸ್ತಾನ್ ಏರ್‌ಕ್ರ್ಯಾಫ್ಟ್ ಕಾರ್ಖಾನೆಯ ನೌಕರರು ಮುಷ್ಕರ ಹೂಡಿ, ಕಾರ್ಖಾನೆಯಿಂದ ನಗರದವರೆಗೆ ಮೆರವಣಿಗೆಯಲ್ಲಿ ಬಂದು ೪,೦೦೦ ಕಾರ್ಮಿಕರ ಸಭೆ ಸಂಪಂಗಿಕೆರೆ ಅಂಗಳದಲ್ಲಿ ನಡೆದರೆ, ಬಿನ್ನಿಮಿಲ್‌ನ ೪,೦೦೦ ನೌಕರರ ಮತ್ತು ಮಿನರ್ವಾ ಮಿಲ್‌ನ ೬೦೦ ನೌಕರರ ಪ್ರತ್ಯೇಕ ಸಭೆಗಳಾದವು. ಆ ದಿನ ನಡೆದ ಮತ್ತೊಂದು ಪ್ರಮುಖ ವಿಷಯವೆಂದರೆ ನಾವು ಮುಷ್ಕರಕ್ಕೆ ಹೋಗುವ ಮೊದಲು ನಮಗೆ ಬೋನಸ್ ನೀಡಬೇಕೆಂದು ಬಿನ್ನಿಮಿಲ್ ಕಾರ್ಮಿಕರು ಪಟ್ಟುಹಿಡಿದರು.[೨೫] ಅಂದರೆ ಬಿನ್ನಿಮಿಲ್ ಕಾರ್ಮಿಕರಿಗೆ ದೇಶದ ಸ್ವಾತಂತ್ರ್ಯಕ್ಕಿಂತ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವುದು ಹಾಗೂ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದು ಮುಖ್ಯವಾಗಿತ್ತು. ಹಾಗಾಗಿ ಇವರಿಗೆ ಕಾಂಗ್ರೆಸ್ ಪಕ್ಷ ಹಾಗೂ ಸ್ವಾತಂತ್ರ್ಯ ಚಳವಳಿ ದಾಳವಾಗಿ ಗೋಚರಿಸುತ್ತಿದ್ದುದು ಸತ್ಯವಾಗಿ ಕಾಣುತ್ತದೆ. ಅಂತೆಯೇ ಕಾಂಗ್ರೆಸ್‌ಗೂ ಸಹ ಹೆಚ್ಚು ಕಾರ್ಮಿಕರು ಚಳವಳಿಯಲ್ಲಿ ಪಾಲ್ಗೊಳ್ಳುವುದರಿಂದ ನಮಗೆ ನೈತಿಕ ಬಲ ಬರುತ್ತದೆ ಎಂಬುದಾಗಿ ಭಾವಿಸಿದ್ದರು.

ಆಗಸ್ಟ್ ೧೩ರಂದು ಬಿನ್ನಿಮಿಲ್, ಮೈಸೂರು ಮಿಲ್, ಮಿನರ್ವಾ ಮಿಲ್ ಕಾರ್ಮಿಕರು ಒಟ್ಟಾಗಿ ಮೆರವಣಿಗೆ ನಡೆಸಿ ಧರ್ಮಾಂಬುಧಿ ಕೆರೆದಂಡೆ ರಸ್ತೆಯ ಒಂದು ಹೆಂಡದಂಗಡಿಯ ಮೇಲೆ ದಾಳಿ ಮಾಡಿದರು. ಅಂದಿನ ಕಾರ್ಮಿಕರ ಜಂಟಿ ಸಭೆಯಲ್ಲಿ ೮,೦೦೦ ಜನರಿದ್ದರು. ಸೆಪ್ಟಂಬರ್ ೬ರ ದಿನವನ್ನು 'ಕ್ವಿಟ್ ಇಂಡಿಯಾ ಡೇ' ಎಂಬುದಾಗಿ ಘೋಷಿಸಲಾಯಿತು, ಹಾಗೆಯೇ ಸೆಪ್ಟಂಬರ್ ೯ ರ ದಿನವನ್ನು 'ನಾಯಕರುಗಳ ಬಂಧನದ ದಿನ' ಎಂಬುದಾಗಿ ಘೋಷಿಸಲಾಯಿತು.[೨೬] ಇದನ್ನು ಸಮರ್ಥಿಸುವ ಘಟನೆಗಳೆಂದರೆ ಸತತ ಮುಷ್ಕರದ ಕಾರಣದಿಂದ ಸೆಪ್ಟ್ಂಬರ್ ೭ ರಿಂದ ಸೆಂಟ್ ಜೋಸೆಫ್ ಕಾಲೇಜು ಅಧಿಕೃತವಾಗಿ ರಜೆ ಘೋಷಿಸಿತು. ಉಳಿದ ಶಾಲಾ ಕಾಲೇಜುಗಳಲ್ಲಿ ಮುಷ್ಕರ ಸಾಗಿಯೇ ಇತ್ತು. ಭಾರತದ ರಕ್ಷಣಾ ಕಾನೂನಿನ 'ಚಟ್ಟ'ವನ್ನು ಸಾಗಿಸುವ ಒಂದು ಭಾರೀ ಶೋಕಯಾತ್ರೆ ಸೆಪ್ಟ್ಂಬರ್ ೭ ರಂದು ನಡೆದು ಕಾರ್ಮಿಕ ನಾಯಕ ಜಿ. ಚಂಗಲಾರಾದ್ಯ (ಇವರು ಬಿನ್ನಮಿಲ್ ನೌಕರರು) ಮತ್ತು ಅವರ ಪತ್ನಿ ಭಾಗೀರಥಮ್ಮ ಈ ಚಟ್ಟ ಹೊತ್ತಿದ್ದರು. ಮಸ್ತಾನ್ ಸಾಬ್ ದರ್ಗಾ, ಅರಳೇಪೇಟೆ ಮೂಲಕ ಈ ಮೆರವಣಿಗೆ ಮೆಜೆಸ್ಟಿಕ್ ವೃತ್ತದ ಬಳಿ ಬಂದಾಗ ಪೋಲಿಸರು ಅದನ್ನು ತಡೆದರು. ಆರುಗಂಟೆ ಕಾಲ ನಡುರಸ್ತೆಯಲ್ಲಿ ಸಾವಿರಾರು ಕಾರ್ಮಿಕರು ಧರಣಿ ನಡೆಸಿದರು. ಧರಣಿ ಕುಳಿತ ಜನಕ್ಕೆ

ಸುತ್ತಲಿನ ಜನ ತಿಂಡಿ, ಪಾನೀಯ ಒದಗಿಸಿದರು. ಸಂಜೆ ಚಟ್ಟವನ್ನು ಸುಟ್ಟರು. ಮುಂದೆ ಸೆಪ್ಟಂಬರ್ ೯ಕ್ಕೆ ಈ ದಂಪತಿಗಳ ಬಂಧನವಾಯಿತು. ಇದರ ಒಂದು ಟಿಪ್ಪಣಿಯನ್ನು ಈ ಅಧ್ಯಾಯದ ಕೊನೆಯಲ್ಲಿ ಟಿಪ್ಪಣಿ '೧'ರ ಸಂಕೇತದಲ್ಲಿ ನೀಡಲಾಗಿದೆ.[೨೭]

ಬಟ್ಟೆಯ ಕಾರ್ಖಾನೆಗಳಲ್ಲಿ ಸೆಪ್ಟಂಬರ್ ೨೧ ರಿಂದ (ಬಿನ್ನಿಮಿಲ್, ಮಿನರ್ವಾ, ಮೈಸೂರು ಮಿಲ್‌ಗಳು) ಮತ್ತೆ ಗಾಂಧೀಜಿಯವರ ಬಿಡುಗಡೆಗೆ ಒತ್ತಾಯಿಸಿ ಮುಷ್ಕರ ಆರಂಭವಾಯಿತು. ಸೆಪ್ಟಂಬರ್ ೨೫ರಿಂದ ಹೊರಗೀಲಿ (ಲಾಕ್ ಔಟ್) ಘೋಷಿಸಿದರು. ೨೫ರಿಂದ ಹೆಬ್ಬಾಳದ ಮಹಾಲಕ್ಷ್ಮಿ ಮಿಲ್‌ನವರೂ ಮುಷ್ಕರ ಹೂಡಿದರು. ಮುಷ್ಕರ ಮೂರು ವಾರ ಹೀಗೇ ಸಾಗಿತ್ತು. ಬಿನ್ನಿಮಿಲ್‌ನ ೭೮, ಮಿನರ್ವದ ೮೫ ಹಾಗೂ ಮೈಸೂರು ಮುಲ್‌ನ ೧೧೦ ನೌಕರರನ್ನು ಕೆಲಸದಿಂದ ಕಿತ್ತುಹಾಕಿ ಮಿಲ್‌ನ ಕ್ವಾರ್ಟರ್ಸ್‌ನಲ್ಲಿದ್ದ ನೌಕರರ ಕುಟುಂಬದವರನ್ನು ಹೊರ ದೂಡಿದರು.[೨೮] ಇಂಥ ನೌಕರರಲ್ಲಿ ಬಹುಪಾಲು ಜನ ಜೈಲಿನಲ್ಲಿ ಇದ್ದರು. ಈ ನಿರ್ಗತಿಕ ಕುಟುಂಬಗಳ ಪಾಡು ನಾಯಿಪಾಡೆನ್ನಬೇಕು. (ಕೆಲಸ ಕಳೆದುಕೊಂಡ ನೌಕರರು ಸ್ವಾತಂತ್ರ್ಯ ಬರುವ ತನಕ ನಿರುದ್ಯೋಗಿಗಳಾಗಿದ್ದರು.) ಈ ಚಳವಳಿಯಲ್ಲಿ ಬಹುಪಾಲು ಅನಕ್ಷರಸ್ಥರಾದ ಕಾರ್ಮಿಕರ ತ್ಯಾಗ ಬಲುದೊಡ್ಡದು.

ಸೆಪ್ಟಂಬರ್ ತಿಂಗಳಿನಲ್ಲಿ ನಡೆದ ಮುಷ್ಕರಗಳು ಬೆಂಗಳೂರಿನ ಹತ್ತಿಬಟ್ಟೆಯ ಗಿರಿಣಿಗಳಲ್ಲಿ ಹೊಸತೊಂದು ಬಗೆಯ ಬೆಳವಣಿಗೆಗೆ ಕಾರಣವಾಯಿತು. ಈಗ ಕಾಂಗ್ರೆಸಿಗರ ಬಂಧನವನ್ನು ವಿರೋಧಿಸಿ ಚಳವಳಿ ನಡೆಸುವುದು ಬೇಡವೆಂದು ನಾಯಕರು ಎಷ್ಟೇ ಮನವಿ ಮಾಡಿಕೊಂಡರೂ ಲೆಕ್ಕಿಸದೆ ಕಾರ್ಮಿಕರೇ ಮುಷ್ಕರಗಳನ್ನು ವ್ಯವಸ್ಥೆಗೊಳಿಸಿಕೊಂಡರು. ಮುಷ್ಕರಗಳ ಈ ಎರಡನೆಯ ಅಲೆಯ ಫಲವಾಗಿ ಅನೇಕರು ಕೆಲಸವನ್ನು ಕಳೆದುಕೊಂಡರು, ಯುದ್ಧಕಾಲದಲ್ಲಿ ಉತ್ಪಾದನೆಯು ಕುಂಠಿತವಾಯಿತು. ಆದರೆ ಆರ್ಥಿಕ ವಿಚಾರಗಳ ಹಾಗೆಯೇ ರಾಜಕೀಯ ವಿಚಾರಗಳಲ್ಲಿಯೂ ಸಂಘಟಿತರಾಗಲು ತಮಗೆ ಶಕ್ತಿಯಿದೆ ಎಂಬುದನ್ನು ಕಾರ್ಮಿಕರು ಸ್ಪಷ್ಟವಾಗಿ ಪ್ರದರ್ಶಿಸಿದರು.[೨೯] ಅಕ್ಟೋಬರ್‌ನಲ್ಲಿ ಕಾಂಗ್ರೆಸ್ ಸದಸ್ಯರುಗಳಾದ ಎಲ್.ಎಸ್.ರಾಜು ಮತ್ತು ಹನುಮಂತಪ್ಪ ಕ್ವಿಟ್ ಇಂಡಿಯಾ ಚಳವಳಿಯ ಮುಷ್ಕರವನ್ನು ನಿಲ್ಲಿಸಿದರು. ಅದೇ ವೇಳೆಯಲ್ಲಿ ಸೀತಾರಾಂ ಶಾಸ್ತ್ರಿ ಅವರು ಒಲ್ಲದ ಮನಸ್ಸಿನಿಂದ ಈ ಮುಷ್ಕರವನ್ನು ಹಿಂತೆಗೆದುಕೊಂಡರು. ಅಕ್ಟೋಬರ್ ೧೬ ರಿಂದ ೬,೩೩೭ ಮಂದಿ ಬಿನ್ನಿಮಿಲ್ ಕಾರ್ಮಿಕರಲ್ಲಿ ೫,೫೫೨ ಜನರು ಕೆಲಸಕ್ಕೆ ಹಿಂದಿರುಗಿದರು.[೩೦] ಅದೇ ರೀತಿ ಅಕ್ಟೋಬರ್ ೨೧ ಮತ್ತು ೨೮ರಲ್ಲಿ ಕ್ರಮವಾಗಿ ಮಿನರ್ವಾ ಮತ್ತು ಮೈಸೂರು ಮಿಲ್ಸ್ ಕಾರ್ಮಿಕರು ತಮ್ಮ ಕೆಲಸಕ್ಕೆ ಹಿಂದಿರುಗಿದರು.

ಕೆ.ಟಿ.ಭಾಷ್ಯಂ, ರಾಮಶರ್ಮ ಇತ್ಯಾದಿ ನಾಯಕರುಗಳು ಬೆಂಗಳೂರಿನ ಕಾರ್ಮಿಕರನ್ನು ಒಗ್ಗೂಡಿಸುವಲ್ಲಿ ಬಹಳ ಪ್ರಯತ್ನಿಸಿದರು. ಅವರ ಕರೆಗೆ ಎಲ್ಲಾ ನೌಕರರು ಸ್ವಾತಂತ್ರ್ಯ ಚಳವಳಿಯಲ್ಲಿ

ಪಾಲ್ಗೊಂಡರು ಎಂದರೆ ತಪ್ಪಾಗಲಾರದು. ಅವರ ಬಗೆಗಿನ ಒಂದು ಟಿಪ್ಪಣಿ '೨' ರ ಸಂಕೇತದಲ್ಲಿ ನೀಡಲಾಗಿದೆ.

**೪.೩. ಸ್ವತಂತ್ರ ನಂತರದ ಸಂಘಗಳು.**

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಜವಾಬ್ದಾರಿ ಸರ್ಕಾರ ಮೈಸೂರು ಸಂಸ್ಥಾನ ಪ್ರದೇಶದಲ್ಲಿ ಜಾರಿಗೆ ಬಂದಿತು. ಕೆ.ಸಿ.ರೆಡ್ಡಿಯವರು ಮುಖ್ಯಮಂತ್ರಿಗಳಾದರು. ಕೆ.ಟಿ.ಭಾಷ್ಯಂ ಅವರು ಕಾರ್ಮಿಕ ಮಂತ್ರಿಗಳಾದರು. ೧೯೪೫-೧೯೫೨ರ ಮಧ್ಯದಲ್ಲಿ ಜವಬ್ದಾರಿ ಸರ್ಕಾರದ ಆಳ್ವಿಕೆ ಕಾಲದಲ್ಲಿ ರಾಜ್ಯದಲ್ಲಿ ಹಲವು ಕಾರ್ಮಿಕ ಮಸೂದೆಗಳು ಜಾರಿಯಾದವು. ಕರ್ನಾಟಕ ಬಾಯ್ಲರ್ ಆಪರೇಷನ್ ಮಸೂದೆಗಳು ಜಾರಿಯಾದವು. ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜನಿಯರ್ ರೂಲ್ಸ್-೧೯೫೦, ಕರ್ನಾಟಕ ಎಕನಾಮೈಸರ್ ರೂಲ್ಸ್-೧೯೫೯ ಒಳಗೊಂಡಂತೆ ಅನೇಕ ಕಾರ್ಮಿಕ ಕಲ್ಯಾಣ ಯೋಜನೆಗೆ ಕಂಬಂಧಿಸಿದ ನೂರಾರು ಕಾನೂನುಗಳು ಜಾರಿಗೆ ಬಂದವು. ಕಾರ್ಮಿಕ ನಾಯಕರಾಗಿ ಸ್ವಯಂ ಕಾರ್ಮಿಕರ ಬವಣೆಗಳನ್ನರಿತಿದ್ದ ಕೆ.ಟಿ..ಭಾಷ್ಯಂ ಅವರ ಅಧಿಕಾರಾವಧಿಯಲ್ಲಿ ವಿವಿಧ ಕ್ಷೇತ್ರಗಳಿಗೆ ರಚಿತವಾದ ಅನೇಕ ಉದ್ಯಮ ಸಂಬಂಧ ಕಾನೂನು ನಿಯಮಗಳು ಜಾರಿಗೆ ಬಂದವು. ಹಿಂದಿನ ಕಾನೂನುಗಳಲ್ಲಿ ಅಡಕವಾಗಿದ್ದ ಮತ್ತು ಜಾರಿಯಾಗದಿದ್ದ ಅನೇಕ ಅಂಶಗಳು ಭಾಷ್ಯಂ ಅವರ ಅಧಿಕಾರಾವಧಿಯಲ್ಲಿ ಬಂದು, ಮಾಲಿಕರ ದಮನ ನೀತಿಯಿಂದ ಬಳಲಿ ಬೆಂಡಾಗಿದ್ದ, ಪ್ರತಿದಿನ ಮಾಲೀಕರ ಕಿರುಕುಳ ಅನುಭವಿಸುತ್ತಿದ್ದ ಕಾರ್ಮಿಕರಿಗೆ ೧೯೪೭-೧೯೫೨ರ ಕಾಲ ಪರ್ವಕಾಲವಾಯಿತು.

ಬೆಂಗಳೂರಿನ ಉತ್ತಮ ಹವೆ ವ್ಯಾಪಾರಿಗಳನ್ನು ಉದ್ಯಮಿಗಳನ್ನು ಆಕರ್ಷಿಸುತ್ತಾ ಬಂದಿದೆ. ಇಲ್ಲಿನ ಉದ್ಯಮಗಳಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಕಾರ್ಮಿಕರ ಅಶಾಂತಿ, ಮುಷ್ಕರ ಸಾಮಾನ್ಯವಾಗಿತ್ತು. ಆಗ ಕಾರ್ಮಿಕರ ಹಿತರಕ್ಷಣೆಗೆ ಬೇಕಾದ ಕಾನೂನುಗಳು ಇರಲಿಲ್ಲ. ಸ್ವಾತಂತ್ರ್ಯ ಬಂದಾಗ (೧೯೪೭) ಸಂಘಟಿತ ಕಾರ್ಮಿಕರ ಸಂಖ್ಯೆ ಬೆಂಗಳೂರಲ್ಲಿ ೯೨,೦೦೦ ಇದ್ದರೆ, ಏಕೀಕರಣ ಆದಾಗ ಅವರ ಸಂಖ್ಯೆ ೧,೧೮,೦೦೦ ಆಗಿತ್ತು.[೫೮] ಮುಂದೆ ಪೀಣ್ಯ, ರಾಜಾಜಿನಗರ, ಬೊಮ್ಮನಹಳ್ಳಿ ಮುಂತಾದ ಕೈಗಾರಿಕಾ ಕ್ಷೇತ್ರಗಳಲ್ಲಿ ಅನೇಕ ಹಿರಿಕಿರಿ ಘಟಕಗಳಾಗಿ ಈಗ ಕಾರ್ಮಿರಕ ಸಂಖ್ಯೆ ಐದು ಲಕ್ಷ ಮೀರಿದೆ.

ಸ್ವಾತಂತ್ರ್ಯಾನಂತರದ ಕೆಲವು ವರ್ಷಗಳಲ್ಲಿ ಕರ್ನಾಟಕದ ಕಾರ್ಮಿಕ ಸಂಘಟನೆಗಳಲ್ಲಿ ವಿಶೇಷ ಬದಲಾವಣೆ ಕಂಡುಬರಲಿಲ್ಲ. ರಾಷ್ಟ್ರೀಯ ಮಟ್ಟದಲ್ಲಿ ಕಾರ್ಮಿಕ ಸಂಘಟನೆಯಲ್ಲಿ ಕಂಡುಬಂದ ಬಿರುಕು ರಾಜ್ಯದ ಸಂಘಟನೆಯಲ್ಲೂ ಕೆಲಮಟ್ಟಿಗೆ ಪ್ರತಿಫಲನಗೊಂಡಿತು. ೫೦ರ ದಶಕದಲ್ಲಿ ಕೈಗಾರಿಕೋದ್ಯಮಗಳಲ್ಲಿ ಬಹುಮಟ್ಟಿಗೆ ಶಾಂತಿ ನೆಲೆಸಿತ್ತು. ಆಗೀಗ ತಲೆದೋರುವ

ತಗಾದೆಗಳನ್ನು ಕೈಗಾರಿಕಾ ನ್ಯಾಯಾಲಯಗಳು ಪರಿಹರಿಸುತ್ತಿದ್ದವು. ಆದರೆ ೬೦ ರ ದಶಕದಲ್ಲಿ ಪರಿಸ್ಥಿತಿ ಬಹಳಷ್ಟು ಬದಲಾಯಿತು. ಭಾರತ–ಚೈನಾ ಯುದ್ಧದ ನಂತರ ಕಾರ್ಮಿಕ ಸಂಘಟನೆ ಎರಡು ಹೋಳಾಯಿತು. ಆಲ್ ಇಂಡಿಯ ಟ್ರೇಡ್ ಯೂನಿಯನ್ ಕಾಂಗ್ರೆಸ್ (AITUC) ನಿಂದ ಹೊರಬಂದವರು ಸೆಂಟರ್ ಫಾರ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (CTUC) ಸ್ಥಾಪಿಸಿದರು.[೧೨] ಅಷ್ಟರಲ್ಲಿ ಎರಡನೆಯ ತಲೆಮಾರಿನ ಕಾರ್ಮಿಕ ಮುಖಂಡರೂ ತಯಾರಾಗಿದ್ದರು. ಇದೇ ಸಮಯದಲ್ಲಿ ಭಾಷೆಯ ಆಧಾರದ ಮೇಲೆ ಸಂಘಟನೆಗಳಲ್ಲಿ ಒಡಕುಗಳು ಕಂಡುಬರತೊಡಗಿದವು. ಹಣದುಬ್ಬರದಿಂದ ಕಾರ್ಮಿಕ ವರ್ಗಗಳ ನೈಜ–ಕೂಲಿ ದರದಲ್ಲಿ ಬಹಳಷ್ಟು ಕಡಿತ ಉಂಟಾಗಿ ಕೆಲವು ಕಾರ್ಮಿಕ ಚಳವಳಿಗಳು ಉಗ್ರರೂಪ ತಾಳಿದವು. ಮುಷ್ಕರಗಳು ಹೆಚ್ಚಾದವು, ಅವುಗಳಲ್ಲಿ ಅನೇಕವು ಹೊಡೆದು ಹಿಂದೋಡುವ ತಂತ್ರವನ್ನು ಬಳಸಿದವು. ಈ ಪರಿಸ್ಥಿತಿಯನ್ನು ಹೇಗೆ ನಿರ್ವಹಿಸಬೇಕೆಂಬುದು ಆಡಳಿತ ವರ್ಗಗಳಿಗೂ ತಿಳಿದಿರಲಿಲ್ಲ. ಕೈಗಾರಿಕಾ ವಾತಾವರಣ ಬಹಳಷ್ಟು ಬಿಗಡಾಯಿಸಿತು. ಆದರೆ ಕೆಲವೇ ಸಮಯದಲ್ಲಿ ಒಪ್ಪಂದಗಳು ಏರ್ಪಟ್ಟು ಪ್ರಬುದ್ಧ ಕೈಗಾರಿಕಾ ವಾತಾವರಣ ಏರ್ಪಟ್ಟಿತು.

ಆದರೆ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಮತ್ತೆ ಪರಿಸ್ಥಿತಿ ಹದಗೆಟ್ಟಿತು. ಕೇಂದ್ರ ಸರ್ಕಾರ ಹಣದುಬ್ಬರ ತಡೆಹಿಡಿಯಲಿಕ್ಕೆ ಹೇರಿದ ಕಡ್ಡಾಯ ಠೇವಣಿ ಯೋಜನೆ, "ಮೇಲ್ದರ್ಜೆ ವೇತನ ದ್ವೀಪ"ಗಳೆಂದು ಕರೆಯಲಾದ ಕೇಂದ್ರ ಸರ್ಕಾರಿ ಸಾರ್ವಜನಿಕ ಉದ್ದಿಮೆಗಳ ಮೇಲೆ ನೀಡಲಾದ ಹೆಚ್ಚುವರಿ ಒತ್ತು ಹಾಗೂ ವೇತನದ ವಿಷಯದಲ್ಲಿ ಭೂತಲಿಂಗಂ ಸಮಿತಿ ನೀಡಿದ ಸಲಹೆಗಳು ಬಹಳಷ್ಟು ವಿವಾದಗಳಿಗೆ ಎಡೆಮಾಡಿಕೊಟ್ಟವು.[೧೩] ಕಾರ್ಮಿಕರ ಮೇಲಿನ ಈ ಎಲ್ಲ "ಸರ್ಕಾರಿ–ನಿಯೋಜಿತ" ದಬ್ಬಾಳಿಕೆಯ ವಿರುದ್ಧ ಹೋರಾಡಲು ದುಡಿಯುವ ವರ್ಗಗಳು ಕಾರ್ಮಿಕ ಐಕ್ಯತೆಗಾಗಿ ಶ್ರಮಿಸಿದವು. AITUC ಮತ್ತು CTUC ಜೊತೆಗೂಡಿ ಕಾರ್ಮಿಕ ಐಕ್ಯತಾ ಒಕ್ಕೂಟವೊಂದನ್ನು ಸ್ಥಾಪಿಸಿದವು.

ಕಾರ್ಮಿಕರ ಒಗ್ಗಟ್ಟನ್ನು ಮತ್ತಷ್ಟು ಬಲಗೊಳಿಸಿದ ಇನ್ನೊಂದು ಘಟನೆ, ಬೆಂಗಳೂರಿನ ಸಾರ್ವಜನಿಕ ಉದ್ದಿಮೆಯೊಂದರಲ್ಲಿ ವೇತನ ಸಮಾನತೆ ಕುರಿತು ನಡೆದ ಚಳವಳಿ. ಬೆಂಗಳೂರಿನ ಎಲ್ಲ ಸಾರ್ವಜನಿಕ ಉದ್ದಿಮೆಗಳ ಸುಮಾರು ೮೦,೦೦೦ ಕಾರ್ಮಿಕರು ಒಂದೇ ಸಂಘಟನೆಯ ಅಡಿಯಲ್ಲಿ ಒಗ್ಗಟ್ಟಾಗಿ ನಿಂತು ವೇತನ ತಾರತಮ್ಯಗಳನ್ನು ನಿವಾರಿಸುವಂತೆ ಆಡಳಿತ ವರ್ಗಗಳ ಮೇಲೆ ಒತ್ತಾಯ ತರಬೇಕೆಂದು ಕೋರಿ ಪ್ರಧಾನಮಂತ್ರಿ ಇಂದಿರಾ ಗಾಂಧಿಗೆ ವೈಯಕ್ತಿಕ ಪತ್ರಗಳನ್ನು ಬರೆದರು.[೧೪] ಈ ತಂತ್ರ ಫಲ ನೀಡದೆ ಹೋದಾಗ ಮೂರು ತಿಂಗಳುಗಳ ಮುಷ್ಕರ ನಡೆಯಿತು. ಕೊನೆಯ ಹಂತದಲ್ಲಿ ಈ ಮುಷ್ಕರ ಹಿಂಸಾತ್ಮಕ ರೂಪ ತಾಳಿ ಜೀವಹಾನಿ ಹಾಗೂ ಆಸ್ತಿಪಾಸ್ತಿ ಹಾನಿಗೆ ಕಾರಣವಾಯಿತು. ಅಷ್ಟೊಂದು ಮಂದಿ ಕಾರ್ಮಿಕರನ್ನು ಒಂದು

ವೇದಿಕೆಯಡಿ ಒಗ್ಗೂಡಿಸುವುದರಲ್ಲಿ ಸಫಲರಾಗಿದ್ದ ಮುಖಂಡರು ಈ ಬೃಹತ್ ಕಾರ್ಮಿಕ ಸಮೂಹದ ಮುಂದಾಳತ್ವ ವಹಿಸುವುದರಲ್ಲಿ ವಿಫಲರಾಗಿದ್ದರು. ಹೀಗಾಗಿ ಮುಷ್ಕರ ವಿಫಲವಾಯಿತು. INTUC ಕಾರ್ಮಿಕ ಸಂಘಟನೆಯ ಅಸಹಕಾರ, ಜನ ಸಾಮಾನ್ಯರ ಅಸಹಾನುಭೂತಿ, ಸರ್ಕಾರದ ಕಠೋರ ನಿಲುವು ಇತ್ಯಾದಿ ಅಂಶಗಳು ಈ ವಿಫಲತೆಗೆ ಕಾರಣಗಳಿರಬಹುದು.

ಭಾರತವು ಜುಲೈ ೧೯೯೧ರಲ್ಲಿ ಹೊಸ ಆರ್ಥಿಕ ನೀತಿಯನ್ನು ಒಪ್ಪಿಕೊಂಡ ನಂತರ ಕಾರ್ಮಿಕ ಚಳವಳಿಗಳು ಹೊಸ ಸ್ವರೂಪವನ್ನು ಪಡೆದಿವೆ. ಉದಾರೀಕರಣ, ಜಾಗತೀಕರಣ, ಖಾಸಗೀಕರಣದ ಮೇಲೆ ಒತ್ತು ನೀಡುವ ಹೊಸ ಆರ್ಥಿಕ ನೀತಿ ಸಂಪೂರ್ಣ ಮಾರುಕಟ್ಟೆ-ಪರ ನಿಲುವುಗಳನ್ನು ಅಳವಡಿಸಿಕೊಳ್ಳುವ ಮೂಲಕ ಸ್ಪರ್ಧಾತ್ಮಕವನ್ನು, ಕಾರ್ಯ ಸಮರ್ಥತೆಯನ್ನು ಸಾಧಿಸಲು ಪ್ರಯತ್ನಿಸುತ್ತದೆ. ಈ ಎಲ್ಲ ನಿಲುವುಗಳ ಬಗ್ಗೆ ಅದರಲ್ಲೂ ವಿಶೇಷವಾಗಿ ಕಾರ್ಮಿಕರನ್ನು ಕೆಲಸದಿಂದ ಹೊರತೆಗೆಯುವ ನೀತಿಯ ಬಗ್ಗೆ ಕಾರ್ಮಿಕ ವರ್ಗಕ್ಕೆ ಅತ್ಯಂತ ಅಸಮಾಧಾನವಿದೆ. ಖಾಸಗೀಕರಣ ಹಾಗೂ ಮಾರುಕಟ್ಟೆ-ಪರ ಧೋರಣೆಗಳಿಂದ ಉಂಟಾಗುವ ಉದ್ಯೋಗ ಅವಕಾಶಗಳಲ್ಲಿನ ಕಡಿತ ಹಾಗೂ ಉದ್ಯೋಗದ ಅಭದ್ರತೆ ಕಾರ್ಮಿಕರಲ್ಲಿ ಭೀತಿ ಹುಟ್ಟಿಸಿದೆ.[೨೫] ಈ ಕಾಲಘಟ್ಟದಲ್ಲಿ ಕಾರ್ಮಿಕ ಐಕ್ಯತೆಯ ತುರ್ತು ಅಗತ್ಯವನ್ನು ಕಾರ್ಮಿಕ ಸಂಘಟನೆಗಳು ಮನಗಂಡಿವೆ. ಈಗ ಕಾರ್ಮಿಕ ಸಂಘಟನೆಗಳು ಬಹಳಷ್ಟು ಭಿನ್ನಾಭಿಪ್ರಾಯಗಳನ್ನು ತೊರೆದಿವೆ. ಸಂಘಟನೆಗಳ ನಡುವೆ ಇದ್ದ ಸ್ಪರ್ಧಾತ್ಮಕ ಮನೋಭಾವ ದೂರವಾಗಿ ಒಟ್ಟುಗೂಡಿ ಕೆಲಸ ಮಾಡುವ ವಾತಾವರಣ ಸೃಷ್ಟಿಯಾಗುತ್ತಿದೆ. ಹೊಸ ಆರ್ಥಿಕ ನೀತಿಯನ್ನು ಪೂರ್ತಿಯಾಗಿ ಹಿಂತೆಗೆದುಕೊಳ್ಳುವಂತೆ ಸರ್ಕಾರದ ಮೇಲೆ ಒತ್ತಡ ತುರುವುದು ಅಸಾಧ್ಯವೆಂಬುದನ್ನು ಕಾರ್ಮಿಕ ಸಂಘಟನೆಗಳು ಮನಗಂಡಿವೆ. ಆದ್ದರಿಂದ ಈ ನೀತಿಯನ್ನು ಸಾರಾಸಗಟಾಗಿ ವಿರೋಧಿಸುವ ಬದಲು ಈ ನೀತಿಯಿಂದ ಕಾರ್ಮಿಕರ ಮೇಲಾಗುವ ದುಷ್ಪರಿಣಾಗಳನ್ನು ಒಂದಷ್ಟು ಕಡಿಮೆ ಮಾಡುವತ್ತ ಪ್ರಯತ್ನಗಳನ್ನು ಸಂಘಟನೆಗಳು ಮಾಡುತ್ತಿವೆ. ಸ್ವಾತಂತ್ರ್ಯ ನಂತರ ಇಷ್ಟೆಲ್ಲಾ ಸುಧಾರಣೆಗಳತ್ತ ದಾಪುಗಾಲು ಹಾಕುತ್ತಿರುವ ಕಾರ್ಮಿಕ ಸಂಘಟನೆಗಳಿಗೆ ೧೯೯೪ರ ವೇಳೆಗೆ ಬಿನ್ನಿಮಿಲ್ ಕಾರ್ಖಾನೆ ತನ್ನ ಕಾರ್ಯವನ್ನು ಸ್ಥಗಿತಗೊಳಿಸಿ, ಕಂಪನಿ ಮುಚ್ಚಲ್ಪಟ್ಟಾಗ ಅದನ್ನು ತಡೆಯುವ ಸಾಹಸವಾಗಲೀ ಅಥವಾ ಸಾವಿರಾರು ಬಿನ್ನಿ ಕಾರ್ಮಿಕರು ಕೆಲಸವಿಲ್ಲದೆ ಬೀದಿಗಿಳಿದಾಗ ಅವರಿಗೆ ಬದಲಿ ಉದ್ಯೋಗ ಕಲ್ಪಿಸುವುದಾಗಲೀ, ಮಾಡಲು ಸಾಧ್ಯವಾಗದೆ ಮೂಖ ಪ್ರೇಕ್ಷಕನಂತೆ ಕೈಕಟ್ಟಿ ನೋಡಿಕೊಂಡು ಕುಳಿತದ್ದು ವಿಪರ್ಯಾಸವೇ ಸರಿ.

### ೪.೪ ಕಾರ್ಮಿಕ ಚಳವಳಿಗಳು ಹಾಗೂ ಮುಷ್ಕರಗಳು

ಬೆಂಗಳೂರಿನ ಬಿನ್ನಿಮಿಲ್ ಕಾರ್ಖಾನೆಯ ಕಾರ್ಮಿಕರ ಹೋರಾಟಗಳನ್ನು ಎರಡು ಬಗೆಯಲ್ಲಿ ಕಾಣಬಹುದು. ಒಂದು ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೇಗೆ ಪ್ರತಿಕ್ರಿಯಿಸಿದರು ಎಂಬುದು,

ಇನ್ನೊಂದು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು, ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಹಾಗೂ ತಮ್ಮ ಮೇಲಾಗುವ ಶೋಷಣೆ, ದೌರ್ಜನ್ಯವನ್ನು ತಡೆಗಟ್ಟಲು ಹೇಗೆ ಚಳವಳಿಗಳು ಹಾಗೂ ಮುಷ್ಕರಗಳಲ್ಲಿ ತೊಡಗಿದರು ಎಂಬುದು, ಈಗ ಎರಡನೆಯದನ್ನು ವಿಶ್ಲೇಷಿಸಲಾಗುವುದು.

೧೯೨೫ರಲ್ಲಿ ಬಿನ್ನಮಿಲ್‌ನ ತಮಿಳು ಮತ್ತು ಕನ್ನಡ ಕೂಲಿ ಆಳಿನ ನಡುವೆ ನಡೆದ ವಿವಾದವು ದೊಡ್ಡ ಸುದ್ದಿಯಾಯಿತು. ಅದು ಅಸ್ಪೃಶ್ಯತೆಯ ಆಚರಣೆ ಕಾರ್ಖಾನೆಗಳಲ್ಲಿಯೂ ಇದ್ದಿತು ಎಂಬುದನ್ನು ಪರಿಚಯಿಸುವ ಘಟನೆಯಾಗಿತ್ತು. ಕೆಲವು ದಿನಗಳ ಹಿಂದೆ (೧೯೨೫) ಕಣ್ಣೀರು ಕೂಲಿಯಾಳುಗಳಲ್ಲಿ ಒಬ್ಬನಾದ 'ಕಸ್ತೂರಿ' ಎಂಬುವವನು 'ಚೆನ್ನ' ಎನ್ನುವ ತಮಿಳು ಕೂಲಿಯಾಳಿಗೆ ಒಂದು ಲೋಟ ನೀರನ್ನು ಕೊಟ್ಟನು. ಆಗ ಆ ತಮಿಳು ಕೂಲಿಯವನು ಅವನನ್ನು ನಿಂದಿಸುತ್ತಾ ನೀನು ಮಾಡಿದ್ದು ತಪ್ಪು, ನಿನ್ನ ಕೈಯಿಂದ ನೀರನ್ನು ಕುಡಿಯಬಾರದು ಏಕೆಂದರೆ ನೀನೊಬ್ಬ ಹೊಲೆಯ ಎಂದನು.[೩೬] ಅಲ್ಲಿಂದ ಮುಂದೆ ಬಿನ್ನಿಮಿಲ್‌ನ ಹಿಂದೂ ಕೂಲಿಗಳು ಹೊಲೆಯರನ್ನು 'ಕಣ್ಣೀರು ಕೂಲಿಗಳು' ಎಂದು ಕರೆಯಲು ಪ್ರಾರಂಭಿಸಿದರು.[೩೭] ಆ ಕೂಡಲೆ ಹಿಂದೂ ಕೂಲಿಗಳ ವಿರುದ್ಧ ಕಣ್ಣೀರು ಕೂಲಿಗಳು ಪ್ರಕರಣವನ್ನು ದಾಖಲುಮಾಡಿದರು. 'ಉಚ್ಚಪ್ಪ'ನು ಇದರ ಮುಖಂಡತ್ವವನ್ನು ವಹಿಸಿದನು. ಅದೇ ಸಮಯದಲ್ಲಿ ಬಿನ್ನಿಮಿಲ್‌ನ ಕಣ್ಣೀರು ಕೂಲಿಗಳು ಇಂತಹ ಪರಿಸ್ಥಿತಿಯನ್ನು ರಾಮಚಂದ್ರರಾವ್‌ಗೆ ತಿಳಿಸಿದರು.[೩೮] ಅವನು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ತಗಡೂರು ಹಳ್ಳಿಯಲ್ಲಿ ಒಂದು ಪಂಚಾಯತ್ ಕೋರ್ಟನ್ನು ಸ್ಥಾಪಿಸಿದ್ದನು. ಅವನು ಬಿನ್ನಿಮಿಲ್ ಸ್ಥಳಕ್ಕೆ ಬಂದು ಸ್ಥಳೀಯ ಕಾಂಗ್ರೆಸ್‌ನ ನೆರವಿನೊಂದಿಗೆ ಒಂದು ಪ್ರಕಟಣೆಯನ್ನು ಅವನ ಹೆಸರಿನೊಂದಿಗೆ ಹೊರಡಿಸಿ, ಮಿಂಟೋ ಆಪ್ತಾಲ್‌ಮಿಕ್ ಆಸ್ಪತ್ರೆಯಲ್ಲಿ ಒಂದು ಸಭೆಯನ್ನು ಘೋಷಿಸಿದನು. ಈ ಸಭೆಯು 'ಬಿ' ಡಿವಿಷನ್ ಇನ್ಸ್‌ಪೆಕ್ಟರ್‌ನ ಉಪಸ್ಥಿತಿಯಲ್ಲಿ ನಡೆದು ಇದರ ವರದಿಯನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ಗೆ ಸಲ್ಲಿಸಿದನು.[೩೯] ಅದೇ ಪ್ರತಿಯ ಇನ್ನೊಂದು ವರದಿಯನ್ನು ಸೂಕ್ಷ್ಮವಾಗಿ ಓದುವುದಕ್ಕಾಗಿ ಆ ವರದಿಯಲ್ಲಿ ಸೇರಿಸಿದನು.

ಆ ಸಭೆಯಲ್ಲಿ ರಾಜಕೀಯ ಭಾಷಣವಿರಲಿಲ್ಲ. ಅದು ಕೇವಲ ಮಿಲ್‌ನ ಹಿಂದೂ ಕೂಲಿಗಳು ಮತ್ತು ಕಣ್ಣೀರುಗಳ ಶಾಂತಿಯ ಬಗ್ಗೆ ಒಳಗೊಂಡಿತ್ತು. ಬನ್ನಿಮಿಲ್‌ನ ನೇಯ್ಗೆಯ ಮಾಸ್ಟರ್ ಆದ ಮುರುಗೇಶನ್ ಪಿಳ್ಳೆ ಯನ್ನು ಆ ಸಭೆಯ ಅಧ್ಯಕ್ಷನನ್ನಾಗಿ ಮಾಡಲಾಗಿತ್ತು.[೪೦] ಹಾಗೂ ಕೆಲವು ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರು ಅಲ್ಲಿ ಉಪಸ್ಥಿತರಿದ್ದರು. ಅವರುಗಳೆಂದರೆ ಹೆಚ್.ವಿ.ಸುಬ್ರಮಣ್ಯನ್, ರಾಮಯ್ಯ, ರಜ್ವಿ, ಭೀಮರಾವ್ ಹಾಗೂ ಇತರರು, ರಾಮಯ್ಯ ಉಪನ್ಯಾಸವನ್ನು ಪರಿಚಯಿಸುತ್ತಾ ಈ ರೀತಿ ತಿಳಿಸಿದನು. ತಗಡೂರು ರಾಮಚಂದ್ರರಾವ್‌ರು ಈ ವಿವಾದವನ್ನು ನಂಜನಗೂಡು ತಾಲ್ಲೂಕು, ತಗಡೂರು ಹಳ್ಳಿಯಲ್ಲಿ ಬಗೆಹರಿಸುತ್ತಾರೆ.

ಹಾಗೆಯೇ ರೈತರ ಸಮಸ್ಯೆಗಳನ್ನು ಬಗೆಹರಿಸುವ ಜನರ ನಾಯಕರಾಗಿದ್ದಾರೆ. ಅದಕ್ಕಾಗಿ ತಗಡೂರಿನಲ್ಲಿ ಒಂದು ಪಂಚಾಯತ್ ಕೋರ್ಟ್ ಅನ್ನು (ನ್ಯಾಯಾಲಯ) ಸ್ಥಾಪನೆಮಾಡಿದ್ದಾನೆ ಎಂದು ತನ್ನ ಉಪನ್ಯಾಸದಲ್ಲಿ ತಿಳಿಸಿದನು.

ರಾಮಚಂದ್ರರಾವ್ ಮಾತನಾಡುತ್ತಾ ನಾವುಗಳು ವರ್ಣಾಶ್ರಮ ಧರ್ಮ ಹಾಗೂ ಹಳೆಯ ಬದುಕಿನ ದಾರಿಗೆ ಹಿಂದಿರುಗಬೇಕಾಗಿದೆ ಎಂದರು. ಸ್ವಧರ್ಮದ ತತ್ವಗಳು ಹಾಗೂ ಪಂಚಮರಿಗೆ ಭಾರತದಲ್ಲಿ ಮೋಕ್ಷ ಎನ್ನುವ ಪರಿಕಲ್ಪನೆಯ ಅಗತ್ಯವೇ ಇಲ್ಲ ಎಂದು ತಿಳಿಸಿದರು. ಅವರ ಪ್ರಕಾರ ಎಲ್ಲಾ ಜಾತಿಗಳು ಸಮಾನವೇ ಆಗಿದ್ದಿತು. ರೈತರನ್ನು ಮೇಲೆತ್ತಲು ಹಾಗೂ ಅವರ ವಿವಾದಗಳನ್ನು ಬಗೆಹರಿಸಲು ಈ ಪಂಚಾಯತ್ ನ್ಯಾಯಾಲಯವನ್ನು ಸ್ಥಾಪಿಸಿರುವುದಾಗಿ ತಿಳಿಸಿದರು.[೯೧] ೬ ಪೈಸೆ ಬೆಲೆಯುಳ್ಳ ಒಂದು ವಿಶೇಷ ಬಗೆಯ ಪೇಪರನ್ನು ಕೋರ್ಟ್‌ನ ದೂರುಗಳಿಗಾಗಿ ರಕ್ಷಿಸಿಟ್ಟನು. ಜನರು ಈ ಕೋರ್ಟನಿಂದ ಹೆಚ್ಚಿನ ಲಾಭವನ್ನು ಪಡೆದುಕೊಳ್ಳುತ್ತಾರೆ ಎಂದು ತನ್ನ ಭಾಷಣದಲ್ಲಿ ತಿಳಿಸಿದರು.

ರಾಮಚಂದ್ರರಾವ್ ತನ್ನ ಮಾತನ್ನು ಮುಂದುವರೆಸುತ್ತಾ ಬೆಂಗಳೂರಿನ ಬಿನ್ನಿಮಿಲ್‌ನಲ್ಲಿ ಕೆಲವು ನಿಶ್ಚಿತ ಜನರು ತಮ್ಮನ್ನು ತಾವೇ ಕಣ್ಣೀರು ಕೂಲಿಗಳು ಎಂದು ಕರೆದುಕೊಂಡಿರುವ ಪತ್ರವನ್ನು ಕಾರ್ಮಿಕರಿಂದ ಸ್ವೀಕರಿಸಿದರು. ಅದರಲ್ಲಿ ಕೆಲವು ವಿವಾದಗಳು ಹಿಂದೂ ಕೂಲಿಗಳು ಮತ್ತು ಅನೇಕ ಜಾತಿಯ ಜನರ (ಅವರು ತಮ್ಮನ್ನು ಹೊಲೆಯರೆಂದು ಸಂಭೋದಿಸಿದ್ದರು) ನಡುವಿನದಾಗಿತ್ತು. ಹೊಲೆಯರು ಪತ್ರದಲ್ಲಿ ಈ ರೀತಿ ತಿಳಿಸಿದ್ದರು, ಈ ವಿವಾದವನ್ನು ಬಗೆಹರಿಸಿ ಇಲ್ಲವೆ ನಾವೆಲ್ಲರೂ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದುವೆವು ಎಂಬುದಾಗಿ ಬೆದರಿಕೆ ಹಾಕಿದ್ದರು.[೯೨] ಇದರಿಂದ ದೃತಿಗೊಳಗಾದ ರಾಮಚಂದ್ರರಾವ್ ಬೆಂಗಳೂರಿಗೆ ಬಂದು ಉಚ್ಚಪ್ಪನನ್ನು ಸಂದಿಸಿ, ಪೋಲಿಸ್ ಠಾಣೆಯಲ್ಲಿ ದೂರಿನ ವಿಚಾರಣೆ ಮಾಡಿ, ಅಲ್ಲಿ ಯಾವುದೇ ಧರ್ಮದ ಅಥವಾ ಜನಾಂಗದ ತಾರತಮ್ಯ ನಡೆದಿಲ್ಲ. ಕೇವಲ ಕಸ್ತೂರಿ ಎನ್ನುವ ಕೂಲಿಯಾಳು ಒಂದು ಲೋಟ ನೀರನ್ನು ತಮಿಳು ಕೂಲಿಯಾಳಾದ ಚನ್ನನಿಗೆ ನೀಡಿದ್ದರಿಂದ, ಅವನು ಕಸ್ತೂರಿಯನ್ನು ಹೊಲೆಯ ಎಂದು ನಿಂದಿಸಿದ್ದರಿಂದ ಇಷ್ಟೆಲ್ಲಾ ಸಮಸ್ಯೆ ಬಿಗಡಾಯಿಸಿದೆ ಎಂಬುದಾಗಿ ರಾಮಚಂದ್ರರಾವ್ ಅರಿತರು. ಹಾಗೆಯೇ ಈ ಪ್ರಕರಣವನ್ನು ವಾಪಸ್ಸು ತೆಗೆದುಕೊಳ್ಳಲು ಸೂಚನೆ ನೀಡಿದರು. ಆದರೆ ಇವರು (ರಾಮಚಂದ್ರರಾವ್) ಈ ಕಣ್ಣೀರುಗಳು ಯಾವ ಸಮುದಾಯಕ್ಕೆ ಸೇರುತ್ತಾರೆ, ಹಾಗೂ ಸಾಮಾಜಿಕ ಪ್ರಪಂಚದಲ್ಲಿ ಇವರ ಸ್ಥಾನಮಾನ ಏನು ಎಂಬುದನ್ನು ವಿಚಾರಣೆ ಮಾಡದೇ ಇರುವುದು ವಿಪರ್ಯಾಸ.

ಅಲ್ಲಿಂದ ಮುಂದೆ ಆರ್.ಗೋಪಾಲಸ್ವಾಮಿ ಅಯ್ಯರ್, ಭಿಮರಾವ್, ಎಸ್.ಎಂ. ರಜ್ವಿ ಕೆ. ಶಾಮಣ್ಣ (ವಕೀಲ), ಮುರುಗೇಶನ್ (ಅದ್ಯಕ್ಷ), ಹನುಮಂತಪ್ಪ (ಮಾಜಿ ಸ್ಕೂಲ್ ಮಾಸ್ಟರ್-

ಕಾಟನ್‌ಪೇಟೆ) ಇವರೆಲ್ಲರೂ ಪಂಚಮರನ್ನು ಮೇಲೆತ್ತುವ ಮತ್ತು ವರ್ಣಾಶ್ರಮದ ಬಗ್ಗೆ ಮಾತನಾಡಿದರು. ಶಾಮಣ್ಣ ಅಲ್ಲಿ ನೆರದಿದ್ದ ವೀಕ್ಷಕರಿಗೆ, ಇಲ್ಲಿ ಯಾರಾದರೂ ಕಣ್ಣೀರು ಕೂಲಿಗಳನ್ನು ಹೊಲೆಯರು ಎಂಬುದಾಗಿ ಬಯಲಿಗೆಳೆಯಲು ಸಾಧ್ಯವಿದ್ದರೆ ಅವರು ಮುಂದೆ ಬನ್ನಿ ಎಂದು ಸವಾಲು ಎಸೆದರು.[೪೩] ಯಾರೂ ಮುಂದೆ ಬರಲಿಲ್ಲ. ಆದರೆ ಒಬ್ಬ ಪೇಕ್ಷಕ ಈ ವಿಷಯವನ್ನು ನಿರ್ಧರಿಸಲು ಇನ್ನೊಂದು ಸಂಘವನ್ನು ನೇಮಿಸಬೇಕಾಗಿದೆ ಎಂದು ತಿಳಿಸಿದನು. ಈ ಸಭೆ ಇಲ್ಲಿಗೆ ಮುಕ್ತಾಯವಾಗಿದೆ ಎಂದು ಘೋಷಿಸಿ, ಈ ಸಭೆಯ ಮುಂದಿನ ಭಾಗವನ್ನು ಬಿನ್ನಿಮಿಲ್‌ನ ಮುಂದೆಯೇ ಇಂದು ಸಂಜೆ ೫.೩೦ಕ್ಕೆ ಮುಂದುವರೆಸುವುದಾಗಿ ತಿಳಿಸಿದರು. ಅಂತೆಯೇ ಸಭೆ ಸಂಜೆ ೫.೩೦ಕ್ಕೆ ಪ್ರಾರಂಭವಾಗಿ ೭.೧೫ಕ್ಕೆ ಮುಗಿಯಿತು. ಅಲ್ಲಿ ೫೦೦ ಜನ ಪ್ರೇಕ್ಷಕರು ನೆರೆದಿದ್ದರು. ಆ ಸಭೆಯಲ್ಲಿ ಯಾವುದೇ ಹಾನಿಯಾಗಲಿಲ್ಲ ಹಾಗೂ ಯಾವುದೇ ರಾಜಕೀಯ ವಿಚಾರವನ್ನು ಮಾತನಾಡಲಿಲ್ಲ. ರಾಮಚಂದ್ರರಾವ್ ಅವರೇ ಒಂದು ಪತ್ರಿಕೆಯಲ್ಲಿ ಈ ವಿಚಾರವಾಗಿ ಹೇಳಿದ ಹೇಳಿಕೆ ಹೀಗಿದೆ.[೪೪]

ವಂದೇ ಮಾತರಂ

**ಜೈ"ಜೈ"ಮಹಾತ್ಮಗಾಂಧಿ** **ಜೈ"ಜೈ"ಕೃಷ್ಣರಾಜೇಂದ್ರ ಭೂಪಾಲ**

ಬೆಂಗಳೂರು ಬಿನ್ನಿಮಿಲ್ಲಿನಲ್ಲಿ ಕೆಲಸಮಾಡುವ ಕೂಲಿಗಳಲ್ಲಿ ಒಬ್ಬರಿಗೊಬ್ಬರಿಗೆ ಮತಸಂಬಂಧವಾದ ಮನಸ್ತಾಪಗಳುಂಟಾಗಿ ಅದರ ಅನರ್ಥವು ಅರಳೇಪೇಟೆಯ ಹಲವು ಸ್ಥಳಗಳಲ್ಲಿ ಆಕ್ರಮಿಸಿ ಅನೇಕ ಗಲಭೆಗೆ ಅವಕಾಶವಿರುವುದೆಂದು ನಂಜನಗೂಡು ತಾಲ್ಲೋಕು ತಗಡೂರು ಗ್ರಾಮ ರಕ್ಷಣಾ ಸಭೆಗೆ ಫಿರ್ಯಾದು ಬಂದಿರುತ್ತದೆ. ಈ ವಿಚಾರವನ್ನು ಅಮೂಲಾಗ್ರವಾಗಿ ವಿಚಾರಿಸಿ ಅಧಿಕಾರಿಗಳಿಗೆ ಮಹಾ ಜನರ ಅಭಿಪ್ರಾಯಗಳನ್ನು ತಿಳಿಸುವುದಾಗಿ ೩೧-೫-೧೯೩೫ ನೇ ಭಾನುವಾರ ಸಾಯಂಕಾಲ ೫ ಗಂಟೆಗೆ ಸರಿಯಾಗಿ ಗಾಂಧೀ ಮೈದಾನದಲ್ಲಿ ಪುರನಿವಾಸಿಗಳ ಸಭೆಯು ನಡೆಯುವುದು.

ಮಹಾಜನರೆಲ್ಲರೂ ದಯಮಾಡಿಸಬೇಕಾಗಿ ಪ್ರಾರ್ಥನೆ.

ತಗಡೂರು ರಾಮಚಂದ್ರರಾವ್
ಕಾರ್ಯದರ್ಶಿ.

ಬಿನ್ನಿಮಿಲ್ ಕೂಲಿಗಳಲ್ಲಿನ ಧಾರ್ಮಿಕ ಭಿನ್ನತೆಗಳ ವಿಷಯವಾಗಿ ಟಿಪ್ಪು ಸುಲ್ತಾನ್‌ನ ಅರಮನೆ ಕೋಟೆಯಲ್ಲಿ ಜೂನ್ ೮, ೧೯೩೫ರಲ್ಲಿ ನಡೆದ ವರದಿಯು ಕಣ್ಣೀರುಗಳ ಕೂಲಿಗಳ ಮುಂದುವರಿದ ಭಾಗವಾಗಿತ್ತು. ಇದರ ಅಧ್ಯಕ್ಷತೆಯನ್ನು ರಾಮಚಂದ್ರರಾವರು ವಹಿಸಿದ್ದರು ಹಾಗೂ ಕಾಂಗ್ರೆಸ್ ಸಮಿತಿಯ ಸದಸ್ಯರಾದ ರಾಮಯ್ಯ ಇದರ ಗುಮಾಸ್ತನಾಗಿ ಕಾರ್ಯ

ನಿರ್ವಹಿಸಿದ್ದನು."[೪೫] ಇದು ಹೆಚ್ಚು ಕಡಿಮೆ ಕೋಮುವಿನ ಪಂಚಾಯತ್ ಕಛೇರಿಯಾಗಿತ್ತು. ಈ ಸಭೆಯು ಸಂಜೆ ೫.೩೦ಕ್ಕೆ ಪ್ರಾರಂಭವಾಗಿ ರಾತ್ರಿ ೧೧.೩೦ರ ವರೆಗೆ ನಡೆಯಿತು. ಅಲ್ಲಿ ಉಚ್ಚಪ್ಪನ ಅಡಿಯಲ್ಲಿ ಬೇರೆ ಸಂಘವು ಸಹ ಹಾಜರಿತ್ತು. ವಕೀಲರಾದ ಶಾಮಣ್ಣ, ಮುರುಗೇಶ ಪಿಳ್ಳೆ (ಬಿನ್ನಿಮಿಲ್ ನೇಯ್ಗೆ ಮಾಸ್ಟರ್)ಯು ಸಹ ಅಲ್ಲಿದ್ದರು. ಎರಡೂ ಸಂಘಗಳು ಸಹ ಅವರ ಹೇಳಿಕೆಗಳನ್ನು ಕೇಳಿ, ದಾಖಲಿಸಿಕೊಂಡರು. ಕೊನೆಯದಾಗಿ ಈ ಕೆಳಕಂಡ ತೀರ್ಮಾನಗಳು ಸಂಘಗಳಿಂದ ಒಪ್ಪಿಗೆ ಪಡೆದುಕೊಂಡು ಪಾಸಾದವು.

೧. ಕಣ್ಣೀರು ಕೂಲಿಯಾಳುಗಳು ಈ ಪ್ರಕರಣವನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು ಮತ್ತು ಉಚ್ಚಪ್ಪ, ಪಾರ್ಟಿಯ ವಿರುದ್ಧವಾಗಿ ನಗರ ಮ್ಯಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ ದಾವೆ ಹೂಡಿದರು.

೨. ಕಣ್ಣೀರು ಕೂಲಿಗಳು ನಾವು ಹೊಲೆಯರ ಸಮುದಾಯದ ಕೆಲವು ಒಳಪಂಗಡಗಳಿಗೆ ಸೇರುತ್ತೇವೆ ಎಂಬುದಾಗಿ ಅರ್ಥಮಾಡಿಕೊಂಡರು. ಹಾಗೆಯೇ ಈ ಪ್ರಶ್ನೆ ಕೊನೆಯದಾಗಿ ಬಗೆಹರಿಯುವವರೆಗೂ ಕಣ್ಣೀರುಗಳು ಮೇಲ್ಜಾತಿಯ ಜನರೊಂದಿಗೆ ಬೆರೆಯುವಂತಿಲ್ಲ.

೩. ಎರಡೂ ಸಂಘಗಳು ಪರಸ್ಪರ ರಾಜಿಯಾಗಬೇಕು ಹಾಗೂ ಸ್ನೇಹ ಬಾಂದವ್ಯ ಹೊಂದಬೇಕು.

ಈ ಸಭೆಯು ಬಹಳ ಮೃದುವಾಗಿ ಕೊನೆಗೊಂಡಿತು.

ಕಣ್ಣೀರು ಕೂಲಿಯಾಳುಗಳ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕೆಲವು ದಾಖಲೆ ಪತ್ರಗಳನ್ನು ಈ ಕೆಳಗೆ ನೀಡಲಾಗಿದೆ.

**SUBJECT**

1. PUBLIC MEETING ORGANISED BY MR.THAGADUR RAMACHANDRA RAO TO SETTLE DISPUTES AMONG THE EMPLOYEES OF THE BINNY MILLS, BANGALORE.

Confidential

Office of the District
Magistrate, Bangalore Dist.
Dated, Mysore, 4th june 1925.

**Dear Sir,**

I beg to submit herewith for information a copy of confidential report No.84 dated 1-6-1925 together with a copy of its enclosures received from the Assistant Superintendent of Police, Bangalore City, re the holding of a

Public meeting organised by one Mr.Thagadur Ramachandra Rao with the aid of the local congress committee to settle certain caste disputes among the employees of the Binny Mills, Bangalore.

**Yours Sincerely**

**B.Ramaswamaiya, Esq.,B.A., B.L.,**

**Chief Secretary to the Govt of Mysore.**

****

2. CONFIDENTIAL

Office of the District Magistrate
Bangalore District
Dated Bangalore, 8th June 1925.

Dear Sir,

I beg to submit here with for information a copy Confidential report No.85 dated 3rd June 1925 from the Assistant Superintendent of police, Bangalore city, together with a copy of its enclosure stating that a meeting was held on the evening of the 1st instant under the presidency of Thogadur Ramachandra Rao to bring about a satisfactory settlement of certain caste dispute among the coolies of the Binny Mills, Bangalore city.

Yours Sincerely

To.
B.Ramaswamaiya, Esq., B.A.,B.L.,
Chief Secretary to the Govt of His
Highness the Maharaja of Mysore.

ಮೈಸೂರು ಪ್ರಾಂತ್ಯದ ಮೊದಲನೇ ಕಾರ್ಮಿಕ ಮುಷ್ಕರವನ್ನು ಬೆಂಗಳೂರಿನ ಬಿನ್ನಿಮಿಲ್‌ನ ಕಾರ್ಮಿಕರು ನಡೆಸಿದರು.[೪೬] ಸರ್ಕಾರ ಈ ಮುಷ್ಕರವನ್ನು ಬಗ್ಗು ಬಡಿದಾಗ ನಡೆದ ಗೋಲಿಬಾರ್‌ನಲ್ಲಿ ಒಬ್ಬ ಸತ್ತು ಅನೇಕ ಮಂದಿ ಗಾಯಗೊಂಡರು. ೧೯೨೫ರಲ್ಲಿ ೧೯೧೪ರ ಕೈಗಾರಿಕಾ ಕಾಯಿದೆ ತಿದ್ದುಪಡಿ ಮಾಡಿ, ಕೆಲಸದ ಅವದಿಯನ್ನು ಕಡಿಮೆ ಮಾಡಿದರಲ್ಲದೆ, ವಾರದ ರಜೆಯನ್ನು

ಜಾರಿಗೊಳಿಸಿದರು. ಆದರೆ ಸರ್ಕಾರವೇ ಮಾಲೀಕನಾದ್ದರಿಂದ ಈ ಕಾಯಿದೆಯು ಅನುಷ್ಠಾನಗೊಳ್ಳದೆ ಹಾಗೆ ಉಳಿಯುವಂತಾಯಿತು.[೪೭]

## ೧೯೨೬ರ ಮುಷ್ಕರ

ಬಿನ್ನಿಮಿಲ್ ಕಾರ್ಮಿಕರ ಮುಷ್ಕರಗಳಲ್ಲಿಯೇ ಅತೀ ಪ್ರಮುಖವಾದದ್ದು ೧೯೨೬ರ ಮುಷ್ಕರ. ಇದರಿಂದಾದ ಪರಿಣಾಮ ಬಹಳ ಆಘಾತಕಾರಿಯಾಗಿದ್ದು, ವಿಶ್ವವ್ಯಾಪಿಯಾಗಿ ವಿಷಯ ಹಬ್ಬಿತು. ಈ ಘಟನೆಯ ವಿವರಣೆ ಈ ಕೆಳಗೆ ನೀಡಲಾಗಿದೆ.

ಬೆಂಗಳೂರಿನಲ್ಲಿರುವ ಬಿನ್ನಿ ಕಂಪನಿಯವರ ಹತ್ತಿ ಮತ್ತು ಉಣ್ಣೆ ಬಟ್ಟೆ ತಯಾರಿಸುವ ದೊಡ್ಡ ಕಾರ್ಖಾನೆಯಲ್ಲಿ ಆ ವೇಳೆಗೆ (೧೯೨೬) ಸುಮಾರು ಐದು ಸಾವಿರಮಂದಿ (೫೦೦೦) ಕಾರ್ಮಿಕರು ದುಡಿಯುತ್ತಿದ್ದರು. ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ತಮ್ಮದೇ ಆದ ಸಂಘವನ್ನು ಈ ಕಾರ್ಮಿಕರು ಸ್ಥಾಪಿಸಿಕೊಂಡರು. ಆದರೆ ಇದಕ್ಕೆ ಮನ್ನಣೆ ದೊರಕಿರಲಿಲ್ಲ. 'ತಮ್ಮ ಸಂಘಕ್ಕೆ ಮನ್ನಣೆ ದೊರೆಯಬೇಕು–ತಮ್ಮ ವೇತನ ಹೆಚ್ಚಬೇಕು' ಎಂದು ಬಿನ್ನಿಮಿಲ್ ಕಾರ್ಮಿಕರು ಮುಷ್ಕರ ಹೂಡಿದರು (೧೯೨೬).[೪೮] ಆಗ ಮುಷ್ಕರವು ಶಾಸನ ಬದ್ಧ ಕ್ರಮ ಎಂದು ಇನ್ನು ಮನ್ನಣೆ ಪಡೆದಿರಲಿಲ್ಲ. ಮುಷ್ಕರ ಯಶಸ್ವಿಯಾಗದಂತೆ ನೋಡಿಕೊಳ್ಳುವುದು ತಮ್ಮ ಕರ್ತವ್ಯವೆಂದು ಪೋಲಿಸರು ಹಾಜರಾದರು. ಮುಷ್ಕರ ಹೂಡಿದ್ದ ಜನ ದಿಗ್ಭ್ರಾಂತರಾಗಿ ಆ ಪೋಲಿಸರ ಮೇಲೆ ಕಲ್ಲು ತೂರಲಾರಂಭಿಸಿದರು.[೪೯] ಪರಸ್ಪರ ಘರ್ಷಣೆ ಆರಂಭವಾಯಿತು. ಗಲಭೆ ಕೋರರನ್ನು ಚದುರಿಸಲು ಬೆತ್ತಗಳು, ಲಾಠಿಗಳು ಹೊರಬಂದವು. ಕಡೆಗೆ ಪೋಲಿಸರು ಗುಂಡುಹಾರಿಸುವುದು ಅನಿವಾರ್ಯವಾಯಿತು. ಕೆಲವರಿಗೆ ಗುಂಡಿನೇಟು ತಗುಲಿತು. ಗೋಲಿಬಾರ್‌ನಲ್ಲಿ ನಾಲ್ವರು ಹಸುನೀಗಿದರು.[೫೦] ಲಾಠಿಪ್ರಹಾರದಿಂದ ಗಾಯಗೊಂಡವರಿಗೆಲ್ಲಾ ಅರಳೇ ಪೇಟೆಯ ಕಾಂಗ್ರೆಸ್ ಕಛೇರಿಯಲ್ಲಿ ಪ್ರಥಮ ಚಿಕಿತ್ಸೆ ನೀಡಲಾಯಿತು. ಪೋಲಿಸರ ವರ್ತನೆ ಮಿತಿಮೀರಿತ್ತೆಂದು ಪತ್ರಿಕೆಗಳಲ್ಲಿ ವರದಿಗಳೂ ಪ್ರಕಟವಾದವು. ನಾಲ್ಕು ಕಾರ್ಮಿಕರ ಈ ತ್ಯಾಗ ಸಮಾಜದ ವಿವಿಧ ಸ್ತರಗಳಲ್ಲಿ ವಿಭಿನ್ನ ಪ್ರತಿಕ್ರಿಯೆಯನ್ನು ಮೂಡಿಸಿತು. ಪತ್ರಿಕೆಗಳು ಕಾರ್ಮಿಕರ ಪರವಾಗಿ ಬರೆದು ಸರ್ಕಾರದ, ಆಡಳಿತ ವರ್ಗದ ಕ್ರಮವನ್ನು ಕಟುಶಬ್ದಗಳಲ್ಲಿ ಖಂಡಿಸಿದವು.[೫೧] ಈ ಚಳವಳಿ ಎಷ್ಟು ಪ್ರಬಲ ಅಲೆಗಳನ್ನೆಬ್ಬಿಸಿತೆಂದರೆ, ಅಂತರಾಷ್ಟ್ರೀಯ ಪತ್ರಿಕಾ ಮಾಧ್ಯಮಗಳಲ್ಲಿ, ಅದರಲ್ಲೂ ಅಮೆರಿಕನ್ ಪತ್ರಿಕೆಗಳಲ್ಲಿ ಈ ಗೋಲಿಬಾರಿನ ಸುದ್ದಿ ಪ್ರತಿಧ್ವನಿಸಿತು.[೫೨]

ಕಾಂಗ್ರೆಸ್ಸಿನ ಧುರೀಣರಾದ ವಕೀಲ ಸಿ.ವಿ.ನರಸಿಂಹ ಅಯ್ಯಂಗಾರ್ ನೇತೃತ್ವದಲ್ಲಿ ಖಾಸಗಿ ವಿಚಾರಣಾ ಸಮಿತಿಯೊಂದನ್ನು ನೇಮಿಸಿ ಈ ಘಟನೆಯ ವಿಚಾರಣೆಗೆ ಮುಂದಾದರು. ಈ ಕ್ರಮ ಬೆಂಗಳೂರಿನಲ್ಲಿ ಕಾರ್ಮಿಕರು ಒಗ್ಗೂಡಲು ಕಾರ್ಮಿಕರಿಗೆ ನೈತಿಕ ಧೈರ್ಯವನ್ನು

ತಂದುಕೊಟ್ಟಿತು.[೫೩] ಬಿನ್ನಿಮಿಲ್ ಕೆಲಸಗಾರರ ಮೇಲೆ ಗುಂಡು ಹಾರಿಸಿದ ಸುದ್ದಿ ತಿಳಿಯುತ್ತಲೇ ಈ ದುರಂತದಿಂದ ದುಖಃಗೊಂಡ ಮಿರ್ಜಾರವರು ಪ್ರಥಮ ಕೌನ್ಸಿಲರ ಜೊತೆ ಗಲಭೆ ನಡೆದ ಪ್ರದೇಶಕ್ಕೆ ಧಾವಿಸಿದರು.[೫೪] ಅಲ್ಲಿ ಸೇರಿದ್ದ ಕಾರ್ಮಿಕರು, ಮಿಲ್ ಮಾಲೀಕರು, ಪೋಲಿಸರು ಮತ್ತು ಸರ್ಕಾರದ ಅಧಿಕಾರಿಗಳನ್ನು ಕಂಡು ವಿಚಾರವಿಮರ್ಶೆಗೆ ತೊಡಗಿದರು. ಚರ್ಚೆ ಬಹಳ ಹೊತ್ತು ನಡೆಯಿತು.

ಜೂನ್ ತಿಂಗಳಿನಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿಯೂ ಈ ಗಲಭೆ ವಿಷಯದ ಪ್ರಸ್ತಾಪವಾಯಿತು. ಕೆಲವು ಸದಸ್ಯರು ಪೋಲಿಸ್‌ನವರು ಬಲಪ್ರಯೋಗ ಮಾಡಲು ಸಾಕಷ್ಟು ಕಾರಣಗಳಿರಲಿಲ್ಲ ಎಂದು ವಾದಿಸಿದರು. ಆದರೆ ದಿವಾನರು "ಕಾರಣಗಳಿದ್ದುದರಿಂದಲೇ ಪೋಲಿಸರು ಗುಂಡು ಹಾರಿಸಬೇಕಾಯಿತು. ಪೋಲಿಸ್ ಅಧಿಕಾರಿಯ ದೃಷ್ಟಿಯಿಂದ ಗುಂಡು ಹಾರಿಸದಿದ್ದರೆ ಗಲಭೆಯನ್ನು ಹತೋಟಿಗೆ ತುರುವುದು ಅಸಾಧ್ಯವೆಂದು ತೋರಿದ್ದರಿಂದಲೇ ಆತ ಗುಂಡು ಹಾರಿಸಲು ಆಜ್ಞಾಪಿಸಿದ. ಆದರೆ ಆ ಅಧಿಕಾರಿ ಗುಂಡು ಉಡಾಯಿಸಬೇಕಾದ ಪ್ರಸಂಗ ತಲೆದೋರಿದಾಗ ಕೈಗೊಳ್ಳಬೇಕಾದ ಎಚ್ಚರಿಕೆ ಕ್ರಮಗಳನ್ನು ಕೈಗೊಂಡಂತೆ ತೋರಲಿಲ್ಲ. ಆದ್ದರಿಂದ ಆ ಅಧಿಕಾರಿಯ ಮೇಲೆ ಸೂಕ್ತ ಕ್ರಮ ಕೈಗೊಳ್ಳಲಾಗಿದೆ."[೫೫] ಎಂದು ಸ್ಪಷ್ಟಪಡಿಸಿದರು. ಅಲ್ಲದೆ ಗಲಭೆಯಲ್ಲಿ ನೊಂದವರ ಕುಟುಂಬಕ್ಕೆ ಎಷ್ಟು ಸಾಧ್ಯವೋ ಅಷ್ಟು ಪರಿಹಾರವನ್ನು ಕೊಡಲಾಯಿತು. ಆದರೆ ಅಧಿಕಾರಿ ವರ್ಗಕ್ಕೆ ಸೇರಿದವರ ವಿಚಾರಣೆ ನಡೆಸಬೇಕೆಂಬ ಬೇಡಿಕೆಗೆ ದಿವಾನರು ಪುರಸ್ಕಾರ ನೀಡಲಿಲ್ಲ.

## ೧೯೩೧ರ ಮುಷ್ಕರ

೧೯೨೦ರ ದಶಕದ ಮಹಾಮುಗ್ಗಟ್ಟಿನಿಂದಾಗಿ ಕಾರ್ಮಿಕರ ಜೀವನ ತೀರಾ ಚಿಂತಾಜನಕವಾಗಿತ್ತು. ಕೈಗಾರಿಕಾ ನಗರಗಳಲ್ಲೆಲ್ಲಾ ಸರಣಿ ಮುಷ್ಕರಗಳೇ ನಡೆದವು. ಜುಲೈ ೧೯೩೧ ರಲ್ಲಿ ರಾಷ್ಟ್ರವಾದಿಗಳು ಬಿನ್ನಿಮಿಲ್ಲು ಮುಷ್ಕರವನ್ನು ಪ್ರಪ್ರಥಮ ಮುಷ್ಕರವಾಗಿ ಸಂಘಟಿಸಿದರು.[೫೬] ಕೆ.ಟಿ.ಭಾಷ್ಯಂ, ಮತ್ತು ರಾಮಶರ್ಮ ಅವರು ಮುಷ್ಕರದ ನೇತೃತ್ವ ವಹಿಸಿದ್ದರು. ಮುಗ್ಗಟ್ಟಿನ ಹೊಡೆತಕ್ಕೆ ಸಿಕ್ಕು ಆಗಲೇ ತತ್ತರಿಸಿದ್ದ ಕಾರ್ಮಿಕರು ತಮಗೆ ಅರ್ಧವಾರ್ಷಿಕ ಬೋನಸ್ಸನ್ನು ನಿರ್ವಹಣಾ ಮಂಡಳಿ ನರಾಕರಿಸಿದ ಕಾರಣ ಈ ಮುಷ್ಕರವನ್ನು ಪ್ರಾರಂಭಿಸಿದ್ದರು. ಬಿನ್ನಿಮಿಲ್ಲಿನ ಮಾಲೀಕರು ಯೂರೋಪಿನವರಾಗಿದ್ದು ಕಾನೂನು ಭಂಗ ಚಳವಳಿಯು ಪರಾಕಾಷ್ಠೆಯಲ್ಲಿದ್ದುದ್ದರಿಂದ ಕಾಂಗ್ರೆಸ್ಸಿಗರು ಸಹಜವಾಗಿಯೇ ಈ ವಿಷಯವನ್ನು ಕೈಗೆತ್ತಿಕೊಂಡು ೪೦೦೦ ಕಾರ್ಮಿಕರನ್ನು ಸಂಘಟಿಸಿದರು.[೫೭] ಕಾರ್ಮಿಕರು ಶಾಂತಿಯುತವಾಗಿ ಮುಷ್ಕರ ನಡೆಸಿದ್ದರಲ್ಲದೆ ತಮ್ಮ ಬೇಡಿಕೆಗಳು ಈಡೇರದ ಹೊರತು ತಾವು ಕಾರ್ಖಾನೆಯ ಸರಹದ್ದಿನಿಂದ

ಹೊರಗೆ ಹೋಗುವುದಿಲ್ಲವೆಂದು ಪಟ್ಟು ಹಿಡಿದರು. ಇದರಿಂದ ದಿಗಿಲುಗೊಂಡ ವ್ಯವಸ್ಥಾಪಕರು ಮತ್ತು ಪೋಲಿಸರು ಕಾರ್ಮಿಕರ ಮೇಲೆ ಗುಂಡು ಹಾರಿಸಿ ಮೂರು - ನಾಲ್ಕು ಜನರನ್ನು ಕೊಂದು ೧೦೦ ಕ್ಕೂ ಅಧಿಕ ಕಾರ್ಮಿಕರನ್ನು ಗಾಯಗೊಳಿಸಿದರು.

ಎರಡನೇ ಮಹಾಯುದ್ಧ ಪ್ರಾರಂಭವಾದ ಹಿನ್ನೆಲೆಯಲ್ಲಿ ಪದಾರ್ಥಗಳ ಬೆಲೆ ಏರಿದ ಕಾರಣ ದುಡಿಯುವ ವರ್ಗದ ಮೇಲೆ ಭಾರಿ ಒತ್ತಡವುಂಟಾಯಿತು. ಆ ಸಂದರ್ಭದಲ್ಲೇ ಕಾರ್ಮಿಕ ರಂಗದಲ್ಲಿ ಕಮ್ಯೂನಿಸ್ಟರ ಚಟುವಟಿಕೆಗಳು ಹೆಚ್ಚು ಕಾಣಿಸಿಕೊಳ್ಳತೊಡಗಿತು.[೫೮] ಕಮ್ಯೂನಿಸ್ಟರ ಕಾರ್ಯಕರ್ತರಾದ ಎಂ.ಎಸ್.ರಾಮರಾವ್, ಸಿ.ಬಿ.ಮೊನ್ನಯ್ಯ ಹಾಗೂ ಎನ್.ಡಿ.ಶಂಕರ್‌ರವರು ಕೈಗಾರಿಕಾ ನಗರಗಳಲ್ಲಿ ಕಾರ್ಮಿಕರ ನಡುವೆ ಕೆಲಸ ಮಾಡಲು ಪ್ರಾರಂಭಿಸಿದರು. ಕಾರ್ಮಿಕ ನಾಯಕರ ದಸ್ತಗಿರಿಯಾಯಿತಾದರೂ ಮುಷ್ಕರ ಮಾತ್ರ ನಿಲ್ಲಲಿಲ್ಲ. ಹಾಗಾಗಿ ಸರ್ಕಾರ ಕಾರ್ಮಿಕರ ಕೆಲವು ಬೇಡಿಕೆಗಳನ್ನಾದರೂ ಈಡೇರಿಸುವುದು ಅನಿವಾರ್ಯವಾಯಿತು. ಅವುಗಳಲ್ಲಿ ಅತ್ಯಂತ ಮುಖ್ಯವಾದುದು 'ಮೈಸೂರು ಕಾರ್ಮಿಕ ಮಸೂದೆ'ಯನ್ನು ಜಾರಿಗೊಳಿಸಿದುದು.[೫೯]

## ೧೯೪೧ರ ಮುಷ್ಕರ

೧೯೪೧ರಲ್ಲಿ ಬಿನ್ನಿ ಮಿಲ್‌ನಲ್ಲಿ ಭಾಷ್ಯಂ ನೇತೃತ್ವದಲ್ಲಿ ಮುಷ್ಕರ ಪ್ರಾರಂಭವಾಯಿತು. ಹತ್ತು ಜನ ಪ್ರೊಬೇಷನ್ ಅವಧಿಯಲ್ಲಿದ್ದ ಕಾರ್ಮಿಕರಿಗೆ ಬೋನಸ್ ನಿರಾಕರಿಸಿದ್ದರಿಂದ ಈ ಮುಷ್ಕರ ಪ್ರಾರಂಭವಾಯಿತು. ಇದು ಭಾಷ್ಯಂ ಅವರ ಬಂಧನದಲ್ಲಿ ಪರ್ಯವಸಾನವಾಯಿತು. ಮುಷ್ಕರ ಎಷ್ಟು ಸಂಘಟಿತವಾಗಿತ್ತೆಂದರೆ, ಬಿನ್ನಿಮಿಲ್‌ನ ಎಲ್ಲಾ ಕಾರ್ಮಿಕರು ತಮಗೆ ಬರಬೇಕಾಗಿದ್ದ ಬೋನಸ್ ಅನ್ನು ನಿರಾಕರಿಸಿದರು. ಈ ಮುಷ್ಕರದ ವಿವರಣೆ ಹೀಗೆದೆ.

ಬೆಂಗಳೂರು ಜವಳಿ ಕಾರ್ಮಿಕ ಸಂಘದ ಸಭೆಯು ಚಿಕ್ಕ ಲಾಲ್‌ಬಾಗ್‌ನಲ್ಲಿ ಜುಲೈ ೨೭ರ ಭಾನುವಾರ, ೧೯೪೧ರಲ್ಲಿ ನಡೆಯಿತು. ಈ ಸಭೆಯಲ್ಲಿ ೨೦೦೦ ಜನರು ಭಾಗವಹಿಸಿದ್ದರು. 'ಪುಟ್ಟಶಂಕರಪ್ಪ' ಅವರು ಈ ಸಭೆಯನ್ನು ಪರಿಚಯಿಸಿ ಈ ರೀತಿ ತಿಳಿಸಿದರು. ಬಿನ್ನಿಮಿಲ್ ಕಾರ್ಮಿಕರು ಬಹುಶಃ ಗಲಿಬಿಲಿಯಾಗಿ ಬೋನಸ್ ಪ್ರಶ್ನೆಯನ್ನು ಎತ್ತಿದ್ದಾರೆ.[೬೦] ಇಲ್ಲಿ ಯಾವುದೇ ತಲೆಕೆಡಿಸಿಕೊಳ್ಳುವ ಅಗತ್ಯವಿಲ್ಲ. ಏಕೆಂದರೆ ಇದು ಸರ್ಕಾರಿ ಅಧಿಕಾರಿಗಳಿಂದ ವಿಚಾರಣೆಯಾಗಿ ಪಾಸಾಗಲಿದೆ. ಈ ಬಿನಿಮಿಲ್ ನಿರ್ವಹಣೆಯ ಕಾರ್ಯ ಅನ್ಯಾಯದಿಂದ ಕೂಡಿದೆ ಹಾಗೂ ಕಾರ್ಮಿಕರ ಸಮಸ್ಯೆಗಳು ನ್ಯಾಯದಿಂದ ಕೂಡಿದೆ. ನಮ್ಮ ಅಧ್ಯಕ್ಷರಾದ ಕೆ.ಟಿ.ಭಾಷ್ಯಂ ರವರು ಈಗ ಈ ವಿಚಾರವಾಗಿ ಮಾತನಾಡಲು ಹೊರಡುವರು ಎಂಬುದಾಗಿ ತಿಳಿಸಿದರು.

**ಕೆ.ಟಿ.ಭಾಷ್ಯಂರ ಹೇಳಿಕೆಗಳು:**

೧೯೪೧ರ ಬಿನ್ನಿಮಿಲ್ ಮುಷ್ಕರಕ್ಕೆ ಸಂಬಂಧಿಸಿದಂತೆ ಕೆ.ಟಿ.ಭಾಷ್ಯಂರು ಈ ರೀತಿಯಾಗಿ

ಹೇಳಿಕೆಯನ್ನು ನೀಡಿದ್ದಾರೆ. ಇತ್ತೀಚೆಗೆ ನಡೆದ ಮುಷ್ಕರದ ಪಲಿತಾಂಶವಾಗಿ ಒಬ್ಬ ಪ್ರತ್ಯೇಕ ಕಾರ್ಮಿಕ ಆಯೋಗದ ಅಧಿಕಾರಿಯನ್ನು ನೇಮಿಸಲಾಗುವುದು. ಒಬ್ಬ ವಿಚಾರಣಾ ಅಧಿಕಾರಿಯನ್ನು ಸಹ ಬಿನ್ನಿಮಿಲ್‌ನ ಮುಷ್ಕರವನ್ನು ವಿಚಾರಣೆ ಮಾಡಲು ನೇಮಿಸಲಾಗುವುದು. ಹಾಗೆಯೇ ಇದರಲ್ಲಿ ಮಹಾರಾಜ ಮಿಲ್ ಮತ್ತು ಮಿನರ್ವಾ ಮಿಲ್ ಮುಷ್ಕರದ ಬಗ್ಗೆ ಸಮಿತಿಯು ಸಹ ಮುಂದುವರೆಯುವುದು. ಅದು ಮೊದಲಿನಂತೆಯೇ ಇರುತ್ತದೆ. ಕಾರ್ಮಿಕರ ಮನವಿಗಳಿಗೆ ಈ ಮಿಲ್‌ಗಳ ಮ್ಯಾನೇಜ್‌ಮೆಂಟ್ ಸಾಮಾನ್ಯವಾಗಿ ಸ್ಪಂದಿಸುವುದಿಲ್ಲ.[೭೧] ಈ ಸಮಿತಿಯು ಕೇವಲ ಒಬ್ಬನೇ ನಮ್ಮ ಸದಸ್ಯನನ್ನು ಮಾತ್ರ ಹೊಂದಿರುತ್ತದೆ, ಅದಕ್ಕಾಗಿ ಅವರು ಯಾವುದೇ ಕ್ಷಮಾ ಭಾವನೆಯನ್ನು ಇಟ್ಟುಕೊಳ್ಳುವುದಿಲ್ಲ. ಈ ಸಮಿತಿಯು ಒಂದು ಹೊಸ ಕಾರ್ಮಿಕ ಕಾಯಿದೆ (Labour Act) ಯ ಕರಡನ್ನು ರಚಿಸಿದೆ.[೭೨] ಅದರ ಪ್ರಕಾರ ಪ್ರತಿಯೊಂದು ಮಿಲ್‌ಗೂ ಒಂದು ಪ್ರತ್ಯೇಕ ಸದಸ್ಯತ್ವದ ಒಂದು ಸಂಘವನ್ನು ಸ್ಥಾಪಿಸಿಕೊಳ್ಳಲು ಅನುಮತಿ ಕೊಟ್ಟಿದೆ, ಅಲ್ಲದೆ ಬೇರೆ ಸಂಘದೊಂದಿಗೆ ಯಾವುದೇ ವಿಷಯವನ್ನು ವ್ಯವಹರಿಸುವುದಕ್ಕೂ ಅನುಮತಿ ಕೊಟ್ಟಿದೆ. ನಾವು ಇದನ್ನು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ನಾವು ಯಾವುದೇ ಅಂತಹ ಉಲ್ಲಂಘನೆಗಳಿಲ್ಲದೆ ಪ್ರತಿಪಾದನೆಯನ್ನು ಮಾಡುವ ಹಕ್ಕನ್ನು ಹೊಂದಿರುತ್ತೇವೆ. ನಾವು ಇದರಲ್ಲಿ ಯಶಸ್ವಿಯಾಗುವೆವು. ಸಂಘದ ಹಣಕಾಸಿನ ವಿಷಯವಾಗಿ ಸರ್ಕಾರ ಎಲ್ಲಾ ಕರ್ಚು ವೆಚ್ಚಗಳ ಪರಿಶೋಧನೆಗೆ ಇಚ್ಚಿಸುತ್ತದೆ.[೭೩] ಅದೇ ರೀತಿ ನಮ್ಮ ಕಾಂಗ್ರೆಸ್ ಇದರ ಅನುಮೋದನೆಯನ್ನು ಹೊಂದುವ ಅಗತ್ಯವಿಲ್ಲ. ನಾವು ನಮ್ಮ ಸ್ವಂತ ವಿಚಾರವಾಗಿ ಯಾವುದೇ ಮನಸ್ಥಿತಿಯಲ್ಲಿ ಯೋಚಿಸಲು ಅರ್ಹರಿರುತ್ತೇವೆ. ಕೆಲವು ರಾಜಕೀಯ ಪ್ರಚೋಧನೆಗಾಗಿ ಸರ್ಕಾರ ಇದನ್ನು ಬಲವಂತಪಡಿಸುವಂತೆಯೂ ಸಹ ನಾವು ಚಿಂತಿಸುತ್ತೇವೆ.

ಆರು ತಿಂಗಳ ಹಿಂದೆ ಒಂದು ವಿಚಾರಣಾ ಸಮಿತಿಯನ್ನು ನೇಮಿಸುವುದಾಗಿ ಸರ್ಕಾರ ಭರವಸೆಯನ್ನು ಕೊಟ್ಟಿತ್ತು ಹಾಗೂ ಇದು ಯಾವುದೂ ಕಷ್ಟದಾಯಕವಾಗಿಲ್ಲ ಎಂಬುದಾಗಿ ನಮಗೆ ತಿಳಿಸಿತ್ತು. ಅದರ ಪ್ರಕಾರವಾಗಿ ನಾವು ಅದಕ್ಕಿಂತ ಹೆಚ್ಚಿನದನ್ನು ಮಾಡಿದೆವು. ಬಿನ್ನಿಮಿಲ್ ಮ್ಯಾನೇಜ್‌ಮೆಂಟ್, ಮುಷ್ಕರ ಸಮಿತಿಯ ಸದಸ್ಯರನ್ನು ಕರೆದಿತ್ತು ಹಾಗೂ ನಾವು ಅವರಿಗೆ (ಕಾರ್ಮಿಕರಿಗೆ) ಬೋನಸ್ಸನ್ನು ನೀಡುವುದಿಲ್ಲ ಎಂಬುದಾಗಿ ತಿಳಿಸಿತ್ತು.[೭೪] ನಾವು ಈ ವಿಷಯವನ್ನು ಪರೀಕ್ಷಿಸಿ ಸರ್ಕಾರಕ್ಕೆ ಮತ್ತು ನಿಮಗೆ ತಿಳಿಸುತ್ತೇವೆ ಎಂಬುದಾಗಿ ಹೇಳಿದರು. ಸರ್ಕಾರ ಏನಾದರೂ ಈ ಸಮಸ್ಯೆಗಳನ್ನು ಬಗೆಹರಿಸದೇ ಹೋದಲ್ಲಿ ಅಲ್ಲಿ ಸಾಮಾನ್ಯ ಮುಷ್ಕರ ನಡೆಯಬಹುದು. ಅದರಲ್ಲಿ ಸುಮಾರು ೧೫,೦೦೦ ಕಾರ್ಮಿಕರು ಪಾಲ್ಗೊಳ್ಳುವರು[೭೫] ಎಂಬುದಾಗಿ ತಿಳಿಸಿದರು. ಹಾಗೆಯೇ ಮುಂದಿನ ಭಾನುವಾರ ನಡೆಯುವ ಸಭೆಯಲ್ಲಿ ದಯವಿಟ್ಟು ಭಾಗವಹಿಸಿ ಎಂದು ಕಾರ್ಮಿಕರಲ್ಲಿ ಮನವಿ ಮಾಡಿಕೊಂಡರು.

ಅಂತೆಯೇ ಭಾನುವಾರ ಸಭೆಯು ಮುನ್ಸಿಪಾಲ್ ಗಾರ್ಡ್‌ನ್‌ನಲ್ಲಿ ನಡೆಯಿತು. ಕೆ.ಟಿ.ಭಾಷ್ಯಂ ಜನರನ್ನು ಉದ್ದೇಶಿಸಿ ಕನ್ನಡದಲ್ಲಿ ಮಾತನಾಡಿದರು.[೭೬] ಅಂದು ಅಲ್ಲಿ ನೆರೆದಿದ್ದ ಜನರ ಸಂಖ್ಯೆ ಬಹಳ ಕಡಿಮೆ ಇದ್ದಿತು. ಆದುದ್ದರಿಂದ ಅವರು ಸಭೆಯನ್ನು ಮುಂದುಹಾಕಲು ಯೋಚಿಸಿದ್ದರು. ಅನೇಕ ವಿಧದ ಮಿಲ್‌ಗಳಿಗಾಗಿ ವಿವಿಧ ಸಂಘಗಳ ರಚನೆಯ ಬಗ್ಗೆ ಅವರಿಗೆ ಯಾವುದೇ ವಿರೋಧವಿರಲಿಲ್ಲ. ಹಾಗೆಯೇ ಒಂದು ಅಥವಾ ಅನೇಕ ಸಂಘಗಳಿಗೆ ಒಬ್ಬನೇ ಸದಸ್ಯನಾಗುವುದರ ಬಗ್ಗೆಯೇ ಇವರಿಗೆ ಯಾವುದೇ ಅತೃಪ್ತಿ ಇರಲಿಲ್ಲ. ಸಂಘದ ನಿಧಿಯ ಕರ್ಚುವೆಚ್ಚಗಳ ವಿಷಯದಲ್ಲಿ ಸರ್ಕಾರವು ನಡುವೆ ಭಾಗಿಯಾಗಬಾರದು ಎಂದು ಇವರು ಒತ್ತಿ ಹೇಳಿದರು.[೭೭] ಬಿನ್ನಿಮಿಲ್‌ನ ಕಾರ್ಮಿಕರು ಶೇ ೧೦ ಕ್ಕಿಂತ ಕಡಿಮೆ ಬೋನಸ್ಸನು ಸ್ವೀಕರಿಸಬಾರದು ಎಂದು ಸಲಹೆ ಮಾಡಿದರು.[೭೮] ಆದರೆ ಬಿನ್ನಿಮಿಲ್‌ನ ಮ್ಯಾನೇಜ್‌ಮೆಂಟ್ ಕಾರ್ಮಿಕರಿಗೆ ಶೇ ೧೦ ರಷ್ಟು ಬೋನಸ್ ಕೊಡದಿರಲು ನಿರ್ಧರಿಸಿದರು. ಮೊದಲಿನಷ್ಟೇ ಕೊಡುವುದಾಗಿ ಎಚ್ಚರಿಕೆ ನೀಡಿದರು. ಇದು ಕಾರ್ಮಿಕರ ಇನ್ನೊಂದು ಮುಷ್ಕರಕ್ಕೆ ಕಾರಣವಾಯಿತು.[೭೯]

ಭಾಷ್ಯಂ ಅವರಿಗೆ ಎ.ವಿ.ರಾಮನಾಥನ್‌ರನ್ನು ಕಾರ್ಮಿಕ ಮಂತ್ರಿಯಾಗಿ ನೇಮಿಸಿದ್ದರ ಬಗ್ಗೆ ಸಂತೋಷವಿದ್ದಿತು. ಕಾರ್ಮಿಕ ಆಯೋಗವು ಉಪದೇಶ ನೀಡುವ ಸ್ಥಾನವನ್ನು ಮಾತ್ರ ಹೊಂದಿದ್ದು ಅದು ಮ್ಯಾನೇಜ್‌ಮೆಂಟ್ ಅಥವಾ ಕಾರ್ಮಿಕರ ಮೇಲೆ ಆಗ್ರಹಪಡಿಸಲು ಯಾವುದೇ ಅಧಿಕಾರವನ್ನು ಹೊಂದಿರಲಿಲ್ಲ. ಕಾರ್ಮಿಕರ ವಿವಾದಗಳನ್ನು ಬಗೆಹರಿಸುವ ಸಲುವಾಗಿ ಒಂದು ನ್ಯಾಯಾಲಯದ ನೇಮಕ ಮತ್ತು ಬಂಡವಾಳಶಾಹಿಗಳಿಗೆ ಮಾರ್ಗದರ್ಶನ ನೀಡಲು ನಿಶ್ಚಿತ ಕಾನೂನು ಕಾಯಿದೆಗಳನ್ನು ಜಾರಿಗೆ ತರಬೇಕು ಎಂಬುದಾಗಿ ತಿಳಿಸಿದರು.[೮೦] ಕಾರ್ಮಿಕರಿಗಾಗಿ ಮಂತ್ರಿಯನ್ನು ನೇಮಿಸಿದ್ದರ ಬಗ್ಗೆ ಇವರಿಗೆ ಪೂರ್ಣವಾಗಿ ತೃಪ್ತಿಯಿರಲಿಲ್ಲ. ಏಕೆಂದರೆ ಜನರಿಗೆ ಈ ಮಂತ್ರಿಯು ಜವಬ್ದಾರನಾಗಿರುವುದಿಲ್ಲ. ಆದರೂ ಸಹ ಇವರು ಕಾರ್ಮಿಕರಿಂದ ನೇಮಕವಾದ ಕಾರ್ಮಿಕ ಮಂತ್ರಿಯನ್ನು ಆ ದಿನದಂದು ಶುಭಕೋರಿದರು. ಇಲ್ಲಿ ಭಾಷ್ಯಂ ಅವರು ಕಾರ್ಮಿಕ ಮಂತ್ರಿಯನ್ನು ಆಯ್ಕೆಮಾಡಿರುವ ವಿಷಯದಲ್ಲಿ ಒಂದು ರೀತಿಯ ದ್ವಂದ್ವದಲ್ಲಿ ಮುಳುಗಿದ್ದರು ಎಂಬುದಾಗಿ ಗೋಚರವಾಗುತ್ತದೆ.

ಕೊನೆಯದಾಗಿ ಇವರು ಖಾದರ್ ಟೋಪಿ (Khaddar caps) ಗಳನ್ನು ಧರಿಸಲು ಜನರಿಗೆ ಸಲಹೆ ಮಾಡಿದರು.[೮೧] ಇದು ಮುಂದಿನ ಸಭೆಗೆ ಅಧಿಕ ಸಂಖ್ಯೆಯಲ್ಲಿ ಸೇರುವ, ಕಾಂಗ್ರೆಸ್‌ಗೆ ಸೇರುವ ಹಾಗೂ ಕಾರ್ಮಿಕ ಸಂಘಕ್ಕೆ ಬೆಂಬಲ ನೀಡುವ ಉದ್ದೇಶಗಳನ್ನು ಹೊಂದಿತ್ತು. ಇಲ್ಲಿ ಭಾಷ್ಯಂ ಅವರ ಕಾಂಗ್ರೆಸ್ ರಾಜಕೀಯವನ್ನು ಕಾಣಬಹುದು. ಸಭೆಯನ್ನು ರಾತ್ರಿ ೭.೪೫ರ ಸುಮಾರಿಗೆ ಕೊನೆಗಾಣಿಸಲಾಯಿತು. ಅಲ್ಲಿ ನೆರೆದಿದ್ದ ಜನರ ಸಂಖ್ಯೆ ಕೇವಲ ೨೦೦ ರಿಂದ ೨೫೦ ರ ನಡುವೆ ಇದ್ದು, ಬಡವಾಗಿತ್ತು.

**ಭಾಷ್ಯಂ ಅವರಿಗೆ ವಿರುದ್ಧವಾಗಿ ಎಂ.ಶೇಶಾದ್ರಿಯವರ ಪತ್ರ:-**

ಆಗಸ್ಟ್ ೨೭, ೧೯೪೭ರಲ್ಲಿ ಎಂ.ಶೇಶಾದ್ರಿಯವರು (Deputy Commissioner) ಬಿ.ಟಿ.ಕೇಶವ ಅಯ್ಯಂಗಾರ್ (ಮೈಸೂರು ಸರ್ಕಾರದ ಮುಖ್ಯ ಕಾರ್ಯದರ್ಶಿ) ಅವರಿಗೆ ಭಾಷ್ಯಂ ವಿರುದ್ಧವಾಗಿ ಬರೆದ ಪತ್ರ ಈ ರೀತಿ ಇದೆ.

ಜುಲೈ ೨೯, ೧೯೪೭ರಲ್ಲಿ ಕಾರ್ಮಿಕರ ಚಟುವಟಿಕೆಗಳಲ್ಲಿ ಅವರ ನಿಕಟ ಸಂಪರ್ಕವಿದ್ದುದರ ವಿಚಾರದಲ್ಲಿ ಭಾಷ್ಯಂ ಅವರ ವಿರುದ್ಧವಾಗಿ ತೆಗೆದುಕೊಂಡ ಕ್ರಮದ ಬಗ್ಗೆ, ಹಾಗೂ ಐ.ಜಿ.ಪಿ. ಮತ್ತು ಕಾರ್ಮಿಕ ಆಯೋಗವನ್ನು ನಾನು ವಿಚಾರಿಸಿದ್ದರ ಬಗ್ಗೆ ಈ ಪತ್ರದಲ್ಲಿ ಹೇಳುತ್ತಿದ್ದೇನೆ. ಅದರ ಪ್ರಕಾರವಾಗಿ ಭಾಷ್ಯಂ ಅವರು ಕಾರ್ಮಿಕ ಸಭೆಗಳಲ್ಲಿ ಭಾಷಣ ಮಾಡಿದ್ದರೆ ಹಾಗೂ ಕಾರ್ಮಿಕರ ಮುಷ್ಕರಕ್ಕೆ ಮಾರ್ಗದರ್ಶನ ನೀಡಿದ್ದರೆ ನಾನು ಎಚ್ಚರಿಕೆಯನ್ನು ನೀಡಿದ್ದೇನೆ. ಹೀಗೆ ಮಾಡಿದ್ದೇ ಆದರೆ ಪರಿಣಾಮಕಾರಿಯಾದ ಕ್ರಮವನ್ನು ಇವರ ವಿರುದ್ಧವಾಗಿ ತೆಗೆದುಕೊಳ್ಳಬೇಕು. ಆದರೆ ಮುಷ್ಕರಕ್ಕೆ ಉತ್ತೇಜನವನ್ನು ನೀಡುವ ಉದ್ದೇಶವನ್ನು ಅವರು ಹೊಂದಿಲ್ಲ ಎಂಬುದಾಗಿ ನನಗೆ ಭರವಸೆಯನ್ನು ನೀಡಿದ್ದರು. ಅಂತೆಯೇ ಅವರು ಯಾವಾಗಲೂ ಕಾರ್ಮಿಕರ ಸಮಸ್ಯೆಗಳ ವಿಚಾರವಾಗಿ ಶಾಂತಿಯುತವಾಗಿ ಬಗೆಹರಿಸಲು ಸದಾ ಸಿದ್ದರು.

ಭಾಷ್ಯಂರು ಬೆಂಗಳೂರು ಅಥವಾ ಬೇರೆ ಕಡೆಗಳಲ್ಲಿ ಕಾರ್ಮಿಕರ ಸಭೆಗಳಲ್ಲಿ ಭಾಗವಹಿಸುವಂತಿಲ್ಲ. ಅವರು ಬೇರೆ ಕಾರಣಗಳನ್ನು ನೀಡಿ ಈ ಸಭೆಗಳಿಂದ ಸ್ವತಃ ಗೈರು ಹಾಜರಾಗಬೇಕು. ಈ ಪೋಲಿಸ್ ವರದಿಯ ಪ್ರತಿಗಳನ್ನು ಈಗಾಗಲೇ ನಿಮಗೆ ಕಳುಹಿಸಿದ್ದೇನೆ. ಕಾರ್ಮಿಕ ಸಭೆಗಳಲ್ಲಿನ ಭಾಷಣಗಳಲ್ಲಿ ಸುಧಾರಣೆಯನ್ನು ತರಲು ಇದು ಗಮನಿಸುತ್ತಿರುತ್ತದೆ.

ವೈಯಕ್ತಿಕವಾಗಿ ಕಾನೂನು ಮಂತ್ರಿಗಳಿಗೆ ಮತ್ತು ನಿಮ್ಮ (ಭಾಷ್ಯಂ) ವಿರುದ್ಧವಾಗಿ ಯಾವುದೇ ಸಂದರ್ಭಗಳಲ್ಲಿ ನಿಗಧಿತ ಕ್ರಮವನ್ನು ತೆಗೆದುಕೊಳ್ಳುವುದಕ್ಕಾಗಿ ನಾನು ಈಗಾಗಲೇ ಈ ಸಂಗತಿಗಳನ್ನು ವರದಿಮಾಡಿದ್ದೇನೆ. ಹಾಗೆಯೇ ನಾನು ಸರ್ಕಾರದ ಸೂಚನೆಗಳಿಗಾಗಿ ಕಾಯುತ್ತಿದ್ದೇನೆ ಎಂದು ತಿಳಿಸಿದ್ದರು.

೧೯೪೭ರ ಬಿನ್ನಿಮಿಲ್ ಮುಷ್ಕರಕ್ಕೆ ಸಂಬಂಧಪಟ್ಟಂತೆ ಕೆಲವು ಮೂಲ ದಾಖಲೆಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

CONFIDENTIAL BRANCH

1. Warning to Mr.K.T.Bhasyam not to incite the labourers of the Binny Mills to strike.

THE BANGALORE WOOLLEN, COTTON & SILK MILLS CO., LD.,

Telegraphic Address:
Woollen Bangalore
Telephone No.2037

Bangalore City., 28th July 1941

Dear Mr. Ramanathan,

I enclose copy of a roport of a Meeting which is suppsed to have taken place at Chick Lolbagh on Sunday 2th july. The report has been given to us from a reliable source. I am seeing Mr.Venkatesa Iyengar this evening about this meeting.

Yours Sincerely

Royasevaprasaktha
A.V.Ramanathan, B.A.,
Member of Council
Bangalore.

***

2. Mr. M.SESHADRI, M.A.,
Deputy Commissioner.

DEPUTY COMMISSIONER OFFICE
BANGALORE
Dated 23th July, 1941.

Dear Mr.Kesavaiengar,

I am Sending herewith for fovour of Perusal, the report No.cc.3/41-42 dated to day, about the proceedings of a meeting of the labourers held on the 27th instant, in the Municipal Gardens, at 6-15 p.m., received from the superintendent of Police, Bangalore city.

Yours sincerely

Rajasevaprasakta
B.T.Kesavaiengar, Esq., B.A.,
Chief Secretary to the Govt. of Mysore,
Bangalore.

**ಕಾರ್ಮಿಕರ ಸಮಸ್ಯೆಗಳು:**

ಬಿನ್ನಿಮಿಲ್‌ನಲ್ಲಿ ಕೆಲಸ ಮಾಡುವ ಕಾರ್ಮಿಕರು ಒಂದಲ್ಲಾ ಒಂದು ಸಮಸ್ಯೆಗೆ ಗುರಿಯಾಗಿದ್ದರು. ಅದು ಮಾಲೀಕರಿಂದಿರಬಹುದು ಅಥವಾ ಯಂತ್ರಗಳಿಂದಿರಬಹುದು ಒಟ್ಟಿನಲ್ಲಿ ಸಮಸ್ಯೆಯ ಸುಳಿಯಲ್ಲಿ ಸಿಲುಕಿದ್ದರು. ೧೯೨೫ರಲ್ಲಿ ನಡೆದ ಶಾಸನ ಸಭೆಯ ಚರ್ಚೆಯಲ್ಲಿ ಬ್ರಿಟಿಷ್ ಭಾರತದಲ್ಲಿ ಉದ್ಯೋಗ ಮಾಡುವ ಕನಿಷ್ಠ ವಯಸ್ಸನ್ನು ೧೦ರಿಂದ ೧೨ ವರ್ಷಕ್ಕೆ ಏರಿಸಲಾಯಿತು. ಆದರೆ ಬಿನ್ನಿಮಿಲ್ಲಿನಲ್ಲಿ ಕೆಲಸಮಾಡಲು ಕನಿಷ್ಠ ವಯಸ್ಸು ೧೧ ಇದ್ದರೆ ಸಾಕಾಗಿತ್ತು.[೭೩] ಇದು ಬಾಲ ಕಾರ್ಮಿಕರ ಸಮಸ್ಯೆಯಾಗಿದ್ದು, ಮಕ್ಕಳು ಪ್ರತಿನಿತ್ಯ ೭ ಗಂಟೆಗಿಂತ ಅಧಿಕವಾಗಿ ಕೆಲಸವನ್ನು ಮಾಡಬೇಕಾಗಿತ್ತು. ಮಹಿಳೆಯರಿಗೂ ಕೂಡ ಒಂದೂವರೆ ಗಂಟೆಗಳ ಕಾಲ ವಿಶ್ರಾಂತಿಯನ್ನು ನೀಡುತ್ತಿರಲಿಲ್ಲ.

೧೯೩೬ರಲ್ಲಿ ವಾರದಲ್ಲಿ ೫೪ ಗಂಟೆಗಳ ಕಾಲ ಕೆಲಸಮಾಡುವ ಸಮಸ್ಯೆಯಿಂದ ಹೊರಬರಲು ಬನ್ನಿಮಿಲ್‌ನ ಕಾರ್ಮಿಕರುಗಳಾದ ರಾಮಸ್ವಾಮಿ ಮತ್ತು ತಿಂಗರಮ್ ಅಧಿಕಾರಿವರ್ಗಕ್ಕೆ ದೂರನ್ನು ನೀಡಿದರು.[೭೪] ಮಿಲ್‌ನ ಅಧಿಕಾರಿಗಳು ಕಾರ್ಮಿಕರಿಗೆ ಯಾವುದೇ ರೀತಿಯ ವಂತಿಕೆಯನ್ನು ನೀಡದೆ ಹೆಚ್ಚುವರಿ ಗಂಟೆಗಳ ಕಾಲ ಕೆಲಸಮಾಡಲು ಒತ್ತಾಯಮಾಡುತ್ತಿದ್ದರು. ರಜೆಯನ್ನು ತೆಗೆದುಕೊಳ್ಳುವುದೂ ಸಹ ಕಷ್ಟವಾಗಿತ್ತು. ಮಹಿಳಾ ಕಾರ್ಮಿಕರು ಮಿಲ್‌ನಲ್ಲಿ ಇದ್ದು, ಅವರು ತಮ್ಮದೇ ಆದ ಸಮಸ್ಯೆಗಳನ್ನು ಹೊಂದಿದ್ದರು. ಯಂತ್ರಗಳ ಹತ್ತಿರ ಹೋಗುವಾಗ ರಕ್ಷಾಕವಚಗಳು ಇರುತ್ತಿರಲಿಲ್ಲ.[೭೫] ಬೆಟ್ಟಮ್ಮ, ವಾಳಿಯಮ್ಮ ಮುಂತಾದವರು ಮಹಿಳಾ ಕಾರ್ಮಿಕರಾಗಿದ್ದರು. ಕಳ್ಳತನವು ಕಾರ್ಖಾನೆಯಲ್ಲಿ ಸರ್ವೇ ಸಾಮಾನ್ಯವಾಗಿದ್ದಿತು. ೧೯೩೩ರಲ್ಲಿ ಒಂದು ಬೇಲ್ ಬಟ್ಟೆಯು ಕಳುವಾದ ಆರೋಪಕ್ಕಾಗಿ ಗುಮಾಸ್ತನನ್ನು ಒಳಗೊಂಡಂತೆ ಮೂವರು ಬನ್ನಿಮಿಲ್ ಕಾರ್ಮಿಕರನ್ನು ಕೆಲಸದಿಂದ ವಜಾಮಾಡಲಾಗಿತ್ತು.[೭೬]

ಸಾಮಾನ್ಯವಾಗಿ ಬಟ್ಟೆಗಿರಣಿಗಳಲ್ಲಿ ಕೆಲಸಮಾಡುವ ಕಾರ್ಮಿಕರು ಕೆಳ ಜಾತಿಗೆ ಸೇರಿದ ಬ್ರಾಹ್ಮಣೇತರ ಹಿಂದೂಗಳಾಗಿದ್ದರು. ಮಿಲ್ ಮತ್ತು ಕಾರ್ಖಾನೆಗಳಲ್ಲಿ ನೈಪುಣ್ಯತೆಯಿಲ್ಲದೆ ಕೆಲಸಮಾಡುವ ಕಾರ್ಮಿಕರೆಂದರೆ ಸಾಮಾನ್ಯವಾಗಿ ಆದಿ ಕರ್ನಾಟಕ ಹಾಗೂ ಆದಿ ದ್ರಾವಿಡರು ಆಗಿದ್ದರು.[೭೭] ಬಿನ್ನಿಮಿಲ್‌ನ ಶೇ ೯೮ ರಷ್ಟು ಕಾರ್ಮಿಕರು ಪಟಾಣ್, ಮಾರ್ವಾರಿ ಮತ್ತು ಮುಲ್ತಾನಿ ಲೇವಾದೇವಿಗಾರರ ಋಣ ಭಾರಕ್ಕೆ ಒಳಗಾಗಿದ್ದರು.[೭೮] ಸಂಬಳ ಆದ ನಂತರ ನಾಲ್ಕು ದಿನಗಳವರೆಗೆ ಮಿಲ್ ಗೇಟ್‌ನ ಬಳಿ ಕಾರ್ಮಿಕರಿಗಾಗಿ ಪೋಲಿಸ್ ರಕ್ಷಣೆಯನ್ನು ನೀಡಬೇಕಾಗಿತ್ತು. ಏಕೆಂದರೆ ಲೇವಾದೇವಿಗಾರರು ಸಂಬಳವನ್ನು ಸಾಲದ ರೂಪದಲ್ಲಿ ಕಸಿದುಕೊಳ್ಳುವ ಭಯ ಕಾರ್ಮಿಕರಲ್ಲಿ ಕಾಡುತ್ತಿತ್ತು.

ಅಂತೆಯೇ ಸೆಪ್ಟಂಬರ್ ೨೦೦೮ರಲ್ಲಿ ಬೆಂಗಳೂರಿನಲ್ಲಿ ಶುಕ್ರವಾರ ಬಿನ್ನಿಮಿಲ್ ಕಾರ್ಮಿಕರಿಗಾಗಿ ಪರಿಹಾರಧನ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಅಲ್ಲಿ ಅವರಿಗೆ ಬಟವಾಡಿ ಮಾಡಿದರು. ಈ ಕಾರ್ಯಕ್ರಮಕ್ಕೆ ಕೇಂದ್ರಿಯ ಜವಳಿ ಮಂತ್ರಿಯಾಗಿದ್ದ ಶಂಕರ್‌ಸಿಂಗ್ ವಾಘೇಲ ಭಾಗವಹಿಸಿದ್ದು, ೨೦೬ ಕಾರ್ಮಿಕರಿಗೆ ೭೬ ಲಕ್ಷ ರೂ.ಗಳನ್ನು ಮೊದಲ ಕಂತಿನಲ್ಲಿ ಬಿಡುಗಡೆ ಮಾಡಿದರು. ಇಲ್ಲಿ ಬಿನ್ನಿಮಿಲ್ ಕಾರ್ಮಿಕನಾದ ನಟರಾಜ್ (೫೫) ಹಾಜರಿದ್ದು, ಅವರು ೨೪ ವರ್ಷಗಳ ಸೇವೆಯ ನಂತರ ೧೯೯೩ರಲ್ಲಿ ತಮ್ಮ ಕೆಲಸಕ್ಕೆ ರಾಜಿನಾಮೆ ನೀಡಿದ್ದರು.[೯] ರಾಜಿನಾಮೆ ನೀಡಿದ್ದರ ಬಗ್ಗೆ ಅವರು ಈ ರೀತಿ ಹೇಳುತ್ತಾರೆ "ನಾವು ಆ ವೇಳೆಗೆ ರಾಜಿನಾಮೆಯನ್ನು ನೀಡಬೇಕಾಗಿತ್ತು, ಏಕೆಂದರೆ ಅವರು ಮಿಲ್‌ನ್ನು ಇಲ್ಲಿ ಮುಚ್ಚಿ ಬೇರೆ ಕಡೆ ತೆರೆಯುವ ಯೋಚನೆಯಲ್ಲಿದ್ದರು."

### ೪.೫ ದಿನಗೂಲಿ, ಅಸಂಘಟಿತ ಕಾರ್ಮಿಕರು ಇತ್ಯಾದಿ

ಕೈಗಾರಿಕಾ ಕಾರ್ಮಿಕರು ಸಂಘಟನೆಗಳನ್ನು ಕಟ್ಟಿ ನೋದಂಣಿ ಪಡೆದು ವೇತನ ಏರಿಕೆ, ಬೋನಸ್ ಇತ್ಯಾದಿ ಸವಲತ್ತುಗಳನ್ನು ಪಡೆದ ಬಹಳ ವರ್ಷಗಳ ನಂತರವೂ ಕೃಷಿ ಮತ್ತು ಕೃಷಿಯೇತರ ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಹುಟ್ಟಿಕೊಂಡಿರಲಿಲ್ಲ. ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಬೆಳೆಯದೆ ಇರುವುದ್ಕಕೆ ಅನೇಕ ಕಾರಣಗಳಿದ್ದವು. ಈ ಕಾರ್ಮಿಕರು ಒಬ್ಬ ಮಾಲೀಕನ ಒಂದು ಕಾರ್ಖಾನೆಯ ಸೂರಿನಡಿ ಕೆಲಸ ಮಾಡುವವರಲ್ಲ.[೧೦] ಈ ವಲಯದ ಕಾರ್ಮಿಕರಲ್ಲಿ ಅನಕ್ಷರತೆ ಹಾಗೂ ಪರಿಸ್ಥಿತಿಯನ್ನು 'ಹಣೆ ಬರಹ' ಎಂದು ಒಪ್ಪಿಕೊಂಡುಬಿಡುವ ಮನೋಭಾವ ಹೆಚ್ಚು. ಇವರಲ್ಲಿ ಪ್ರಬಲ ಮುಖಂಡರೂ ಇರಲಿಲ್ಲ. ಬೇರೆ ಬೇರೆ ಕಡೆ ಕೆಲಸ ಮಾಡುವ ಜನರನ್ನು ಒಗ್ಗೂಡಿಸುವ ಕಾರ್ಯದಲ್ಲಿ ಎದುರಿಸಬೇಕಾದ ಕಷ್ಟನಷ್ಟಗಳ ಅರಿವಿದ್ದ ಹೊರಗಿನ ನಾಯಕರು ಇವರನ್ನು ಸಂಘಟಿಸುವ ಕಾರ್ಯಕ್ಕೆ ಕೈಹಾಕುವಲ್ಲಿ ಹಿಂಜರಿದರು.

ಆದರೆ ಕರ್ನಾಟಕದಲ್ಲಿ ಅಸಂಘಟಿತ ವಲಯದ ಕಾರ್ಮಿಕರನ್ನು ಒಗ್ಗೂಡಿಸುವ ಪ್ರಯತ್ನ ೧೯೩೦ ರಲ್ಲೇ ಪ್ರಾರಂಭವಾಗಿತ್ತು.[೧೧] ದಕ್ಷಿಣ ಕನ್ನಡದ ಬೀಡಿ ಕಾರ್ಮಿಕರನ್ನು ಒಗ್ಗೂಡಿಸಿದ್ದು ಈ ನಿಟ್ಟಿನಲ್ಲಿ ಪ್ರಥಮ ಪ್ರಯತ್ನವಾಗಿತ್ತು.[೧೨] ಆದರೆ ಮಾಲೀಕರು ಬೀಡಿ ಕಟ್ಟುವ ಕೆಲಸವನ್ನು ಗ್ರಾಮೀಣ ಪ್ರದೇಶಗಳಿಗೆ ವರ್ಗಾಯಿಸಿ ಗುತ್ತಿಗೆದಾರರ ಮೂಲಕ ಕೆಲಸ ಮಾಡಿಸಿಕೊಳ್ಳುವ ಪರಿಪಾಠ ಪ್ರಾರಂಭಿಸುವ ಮೂಲಕ ಈ ಚಳವಳಿಗೆ ಭಾರಿ ಪೆಟ್ಟು ಕೊಟ್ಟರು. ಆದರೂ ಬೀಡಿ ಉದ್ಯಮದಲ್ಲಿ ಚಳವಳಿ ಮುಂದುವರೆಯಿತು.

ಬೆಂಗಳೂರಿನಲ್ಲಿ ನಡೆದ ಕಾರ್ಮಿಕ ಹೋರಾಟಗಳೆಲ್ಲಾ ಸಂಘಟಿತ ವಲಯದಿಂದ ಹೊರಹೊಮ್ಮಿದವುಗಳು, ಅಸಂಘಟಿತ ಲಕ್ಷಾಂತರ ಕಾರ್ಮಿಕರು ತಮ್ಮ ದಿನನಿತ್ಯದ ಬದುಕಿಗಾಗಿ,

ತುತ್ತು ಕೂಳಿಗಾಗಿ ಪಡುವ ಯಾತನೆಯ ಬಗ್ಗೆ ಯಾವ ಐತಿಹಾಸಿಕ ಹೋರಾಟವೂ ನಡೆದಿಲ್ಲ.[೮೩] ಅದಕ್ಕೆ ಕಾರಣ ಅಸಂಘಟಿತ ಕಾರ್ಮಿಕರು ಸಂಘಟಿತ ಕಾರ್ಮಿಕರಂತೆ ಹೆಚ್ಚು ದಿನ ತಮ್ಮ ಕೆಲಸ ನಿಲ್ಲಿಸಿ ಚಳವಳಿ ನಡೆಸಲು ಇರುವ ಅವರ ಆರ್ಥಿಕ ಸಂಕಷ್ಟ, ದಿನನಿತ್ಯದ ಅವರ ತುತ್ತಿನ ಬವಣೆ. ಚಳವಳಿ ನಿರತ ಕಾರ್ಮಿಕರ ವಿರುದ್ಧ ಮಾಲಿಕರ ಕಠಿಣಕ್ರಮ ಮತ್ತು ಚಳವಳಿಯನ್ನು ಹತ್ತಿಕ್ಕುವ ಮಾಲಿಕವರ್ಗದ ತಂತ್ರ, ಈ ಅಸಂಘಟಿತ ಕಾರ್ಮಿಕರನ್ನು ಎಲ್ಲ ರಾಜಕೀಯ ಪಕ್ಷದ ಧುರೀಣರೂ ತಮ್ಮ ಬಂಡವಾಳವಾಗಿಸಿಕೊಂಡು ಅವರ ಕ್ಷೇಮಕ್ಕಾಗಿ ದುಡಿಯುವ ಭರವಸೆಯನ್ನು ನೀಡುತ್ತಾ ಬಂದಿದ್ದಾರೆ.[೮೪] ಆದರೆ ಸರ್ಕಾರವಾಗಲೀ, ಕಾರ್ಮಿಕ ನಾಯಕರಾಗಲೀ ಈ ನಿಟ್ಟಿನಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಅಸಂಘಟಿತ ಕಾರ್ಮಿಕರ ಬದುಕಿಗೆ ರೂಪವೊಂದನ್ನು ನೀಡಲು ಪ್ರಾಮಾಣಿಕ ಪ್ರಯತ್ನ ನಡೆಸದಿರುವುದು ದುರದೃಷ್ಟಕರ. ಕಮ್ಯೂನಿಸ್ಟ್ ಸಂಘಟನೆಗಳು ಈ ಬಗ್ಗೆ ಅಲ್ಪಸ್ವಲ್ಪ ಕಾಳಜಿ ವಹಿಸಿದ್ದರೂ ಯಶಸ್ಸು ಮರೀಚಿಕೆ.

ಜನವರಿ ೨೦೦೧ ರ ಅಂತ್ಯದವರೆಗೆ ಬೆಂಗಳೂರಿನಲ್ಲಿ ನೋಂದಣಿಯದ ಕಾರ್ಮಿಕ ಸಂಘಟನೆಗಳು ಒಟ್ಟು ೧೮೯೯.

**ಅಡಿಟಿಪ್ಪಣಿಗಳು**

೧. ಕುಮಾರ್ ಬಿ.ಪಿ., ದಾವಣಗೆರೆ ಹತ್ತಿಗಿರಿಣಿ ಕಾರ್ಮಿಕರ ಚಳವಳಿಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೫೪.

೨. ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ೨೦೦೨, ಪು.೫೬.

೩. ಕುಮಾರ ಬಿ.ಪಿ., ದಾವಣಗೆರೆ ಹತ್ತಿಗಿರಿಣ ಕಾರ್ಮಿಕರ ಚಳವಳಿಗಳು, ಅಪ್ರಕಟಿತ ಪಿಎಚ್.ಡಿ ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೫೪.

೪. ಅದೇ.

೫. ಅದೇ.

೬ ಅದೇ.

೭ ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೨೯೧.

೮. ಷೇಕ್ ಅಲಿ ಬಿ. (ಪ್ರಸಂ.), ಕರ್ನಾಟಕ ಚರಿತ್ರೆ, ಸಂ.೭, ೧೯೯೭, ಪು.೧೪೦.

೯. ಅದೇ

೧೦. ಅದೇ

೧೧. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೫೦.

೧೨. ಜಾನಕಿ ನಾಯಕ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು.೨೫೭.

೧೩. ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ೨೦೦೨, ಪು.೬೫.

೧೪. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ:ಚರಿತ್ರೆ, ೨೦೦೧, ಪು.೮೩೮.

೧೫. ಅದೇ

೧೬. ಅದೇ, ಪು.೮೪೦.

೧೭. ಅದೇ, ಪು.೮೪೩.

೧೮. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೫೮.

೧೯. ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ೨೦೦೨, ಪು.೬೦.

೨೦. ಅದೇ, ಪು.೬೫.

೨೧. ಅದೇ.

೨೨. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೫೫.

೨೩. ಅದೇ.

೨೪. ಅದೇ.

೨೫. ಜಾನಕಿ ನಾಯಕ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು.೨೭೮.

೨೬. ಅದೇ, ಪು.೨೮೦.

೨೭. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು.೬೧.

೨೮. ಅದೇ.

೨೯. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ಚರಿತ್ರೆ, ೨೦೦೧, ಪು.೮೩೯.

೩೦. ಜಾನಕಿ ನಾಯಕ್, ಮೈನರ್ಸ್ ಆ್ಯಂಡ್ ಮಿಲ್ ಹ್ಯಾಂಡ್ಸ್ ೧೯೯೮, ಪು. ೨೮೧.

೩೧. ಸೂರ್ಯನಾಥ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು. ೭೩.

೩೨. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ಚರಿತ್ರೆ, ೨೦೦೧, ಪು. ೮೪೪.

೩೩. ಅದೇ.

೩೪. ಅದೇ.

೩೫. ಅದೇ, ಪುಟ, ೮೪೫.

೩೬. ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು, ಕಾನ್ಫಿಡೆನ್ಷಿಯಲ್ ರಿಪೋರ್ಟ್, ೪ನೇ ಜೂನ್, ೧೯೨೫, ನಂ.೮೪

೩೭. ಅದೇ.

೩೮. ಅದೇ

೩೯. ಅದೇ

೪೦. ಅದೇ

೪೧. ಅದೇ

೪೨. ಅದೇ

೪೩. ಅದೇ

೪೪. ಅದೇ.

೪೫. ಕರ್ನಾಟಕ ಸ್ಟೇಟ್ ಆರ್ಕೈವ್ಸ, ಬೆಂಗಳೂರು, ಕಾನ್ಫಿಡೆನ್ಷಿಯಲ್ ರಿಪೋರ್ಟ್, ೮ನೇ ಜೂನ್, ೧೯೨೫, ನಂ.೮೫

೪೬. ಷೇಕ್ ಅಲಿ ಬಿ. (ಪ್ರಸಂ.), ಕರ್ನಾಟಕ ಚರಿತ್ರೆ, ಸಂಪುಟ –೭, ೧೯೯೭, ಪು. ೧೪೦.

೪೭. ಅದೇ.

೪೮. ಸುಂದರ್ ರಾವ್ ಬ.ನ., ಬೆಂಗಳೂರಿನ ಇತಿಹಾಸ, ೧೯೮೫, ಪು. ೫೩೩.

೪೯. ಅದೇ.

೫೦. ಸೂರ್ಯನಾಥ್ ಕಾಮತ್, ಕೃಷ್ಣಯ್ಯ ಎಂ.ಎಚ್. (ಸಂ.), ಬೆಂಗಳೂರು ದರ್ಶನ, ೧೯೭೫, ಪು. ೨೯೧.

೫೧. ಅದೇ.

೫೨. ಅದೇ.

೫೩. ಅದೇ.

೫೪. ಸುಂದರ್ ರಾವ್ ಬ.ನ., ಬೆಂಗಳೂರಿನ ಇತಿಹಾಸ, ೧೯೮೫, ಪು. ೫೩೪.

೫೫. ಅದೇ.

೫೬. ಷೇಕ್ ಅಲಿ ಬಿ. (ಪ್ರಸಂ.), ಕರ್ನಾಟಕ ಚರಿತ್ರೆ, ಸಂಪುಟ -೭, ೧೯೯೭, ಪು. ೧೪೦.

೫೭. ಅದೇ.

೫೮. ಅದೇ.

೫೯. ಅದೇ.

೬೦. ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು, ಕಾನ್ಫಿಡೆನ್ಸಿಯಲ್ ರಿಪೋರ್ಟ್ ೨೮ ನೇ ಜುಲೈ ೧೯೪೧, ನಂ. ಸಿಸಿ ೩/೪೧-೪೨.

೬೧. ಅದೇ.

೬೨. ಅದೇ.

೬೩. ಅದೇ.

೬೪. ಅದೇ.

೬೫. ಅದೇ.

೬೬. ಅದೇ.

೬೭. ಅದೇ.

೬೮. ಅದೇ.

೬೯. ಅದೇ.

೭೦. ಅದೇ.

೭೧. ಅದೇ.

೭೨. ಅದೇ.

೭೩. ಜಾನಕಿ ನಾಯರ್, ಮೈನರ್ಸ್ ಆ್ಯಂಡ್ ಮಿಲ್‌ಹ್ಯಾಂಡ್ಸ್, ೧೯೯೮, ಪು. ೧೯೫.

೭೪. ಅದೇ, ಪು. ೧೯೭

೭೫. ಅದೇ, ಪು. ೨೦೧

೭೬. ಅದೇ, ಪು. ೨೦೩.

೭೭. ಅದೇ, ಪು. ೨೦೫.

೭೮. ಅದೇ, ಪು. ೨೨೬.

೭೯. ದ ಹಿಂದೂ ಪತ್ರಿಕೆ, ಶನಿವಾರ, ಸೆಪ್ಟಂಬರ್ ೧೩, ೨೦೦೮.

೮೦. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ಚರಿತ್ರೆ, ೨೦೦೧, ಪು. ೮೪೮.

೮೧. ಅದೇ

೮೨. ಅದೇ

೮೩. ಸೂರ್ಯನಾಥ ಕಾಮತ್, ಎಂ.ಎಚ್. ಕೃಷ್ಣಯ್ಯ (ಸಂ.), ಬೆಂಗಳೂರು ದರ್ಶನ, ೧೯೭೫, ಪು.೨೯೫

೮೪. ಅದೇ.

೮೫. ಅದೇ.

ಟಿಪ್ಪಣಿ'೧'

"ಜೀವನದಲ್ಲಿ ಹೊಸ ಪುಟವನ್ನು ಪ್ರಾರಂಭಿಸಿ ಎಂಟು ತಿಂಗಳಾಗಿರಬಹುದು. (ಮದುವೆಗೆ ಮುಂಚೆಯೇ ಸ್ವಾತಂತ್ರ್ಯಕ್ಕಾಗಿ ತಮ್ಮ ಜೊತೆಯಲ್ಲಿ ತ್ಯಾಗ ಮಾಡಲು ಸಿದ್ಧಳಾಗಬೇಕೆಂದು ನನ್ನಿಂದ ನನ್ನ ಪತಿ ವಚನವನ್ನು ತೆಗೆದು ಕೊಂಡಿದ್ದರು.) ಕ್ವಿಟ್ ಇಂಡಿಯಾ ಚಳವಳಿ ನಡೆಸಲು ಕರೆಬಂತು.........

"ಬೆಂಗಳೂರಿನ ಎಲ್ಲಾ ಕೂಲಿಕಾರರು ಸೇರಿ ಬೃಹತ್ ಮೆರವಣಿಗೆ ನಡೆಸಬೇಕೆಂದೂ ಚಟ್ಟಕಟ್ಟಿ ಅದರಲ್ಲಿ ಬ್ರಿಟಿಷ್ ಗೊಂಬೆಯನ್ನು ಇಟ್ಟು ಮೆರವಣಿಗೆಯಲ್ಲಿ ಅದನ್ನು ಕೊಂಡೊಯ್ದು ಸುಡಬೇಕೆಂದೂ ಏರ್ಪಾಟು ನಡೆದಿತ್ತು. ಅದರಂತೆ ಮೆರವಣಿಗೆಯ ಮುಂದೆ ಚಟ್ಟವನ್ನು ನಾನು ಮತ್ತು ಯಜಮಾನರು ಹೊತ್ತುಕೊಂಡು ಬೆಳಗ್ಗೆ ೮ ಗಂಟೆಗೆ ಕಾಂಗ್ರೆಸ್ ಆಫೀಸಿದ್ದ ಅರಳೇ ಪೇಟೆಯಿಂದ ಹೊರಟು ಮೆಜೆಸ್ಟಿಕ್‌ಗೆ ೧೧ ಗಂಟೆಗೆ ಬರುವ ವೇಳೆಗೆ ಶಸ್ತ್ರ ಸಜ್ಜಿತ ಪೋಲಿಸ್ ದಳದವರು ನಮ್ಮನ್ನು ತಡೆದರು............ (ಪೋಲಿಸರ) ಗುಂಡಿಗೆ ಎದುರಾಗಿ ನಿಂತ ನಮಗೆ ಜೀವದಾಸೆ ಇರಲಿಲ್ಲ. ಸಂಜೆ ೫ ಗಂಟೆಗೆ ಅದೇ ಸ್ಥಳದಲ್ಲಿ ಬಹಿರಂಗ ಸಭೆ ಸೇರಿ ಬ್ರಿಟಿಷ್ ಗೊಂಬೆಯನ್ನು ಚಟ್ಟ ಸಮೇತ ಬೆಂಕಿಗೆ ಆಹುತಿ ಮಾಡಿ ಅಂದಿನ ನಮ್ಮ ಕಾರ್ಯವನ್ನು ಶಾಂತರೀತಿಯಿಂದ ನಡೆಸಿದವು...........

"ತಾರೀಖು ೯.೯.೧೯೪೨ ರಂದು ನನ್ನನ್ನು ನನ್ನ ಪತಿಯನ್ನು ವಾರಂಟ್ ತೆಗೆದುಕೊಂಡು ಬಂಧಿಸಿದರು. ಅದೇ ದಿನ ನನ್ನ ತವರು ಮನೆಯವರು ಗೌರಿಹಬ್ಬಕ್ಕೆ ಮದುವೆಯಾದ ಮೊದಲನೆ

ವರ್ಷದ ಬಾಗಿನ ಕೊಡಿಸುವುದಕ್ಕೆ ಕರೆಯಲು ಬಂದಿದ್ದರು. ಇತ್ತ ಸಂಬಂಧದ ತವರುಮನೆ, ಅತ್ತ ದೇಶದ ಸೆರೆಮನೆ......... ತವರು ಮನೆಗಿಂತ ದೇಶದ ಸ್ವಾತಂತ್ರ್ಯ ಪಡೆಯುವ ಸೆರೆಮನೆ ಲೇಸೆಂದು ತೀರ್ಮಾನಿಸಿ ಬಂಧಿಸಲು ಬಂದಿದ್ದ ಪೋಲಿಸರನ್ನು ಹಿಂಬಾಲಿಸಿ ಹೋದೆವು."

**ಟಿಪ್ಪಣಿ '೨'**

ಬಿನ್ನಿಮಿಲ್ ಕಾರ್ಮಿಕ ಸಂಘದ ಕಾರ್ಯದರ್ಶಿಯಾಗಿದ್ದ ಎಂ.ಎ.ರಾಮಶರ್ಮ ಗಣ್ಯ ಕಾರ್ಮಿಕ ಸಂಘಟಕರಾಗಿದ್ದರಲ್ಲದೆ ಮದ್ರಾಸಿನ 'ಸ್ವದೇಶಿ ಮಿತ್ರನ್' ಪತ್ರಿಕೆಯ ಸುದ್ದಿಗಾರರಾಗಿದ್ದರು. ಬಿನ್ನಿಮಿಲ್ ಕಾರ್ಮಿಕ ಸಂಘಟನೆಯಿಂದಲೇ ಕಾರ್ಮಿಕ ಹಿತರಕ್ಷಣೆಯ ಹೋರಾಟ ಬೆಂಗಳೂರಲ್ಲಿ ಮೊದಲಾಯಿತು. ರಾಮಶರ್ಮರು ಅನೇಕ ಬಾರಿ ಮಿಲ್ ಅಧಿಕಾರಿಗಳೊಡನೆ ಸೆಣಸಬೇಕಾಯಿತಲ್ಲದೆ ಮುಷ್ಕರಗಳನ್ನು ಮಾಡಬೇಕಾಗಿ ಬಂದಿತು. ಲಾಠಿ ಪ್ರಹಾರ, ಗುಂಡು ಹಾರಿಸೋಣ, ಬಂಧನ, ಶಿಕ್ಷೆ ಮುಂತಾದವುಗಳು ಅನೇಕ ಬಾರಿ ನಡೆದವು. ಕಾರ್ಮಿಕ ಸಂಘದ ಅಧ್ಯಕ್ಷರು ಕೆ.ಟಿ. ಭಾಷ್ಯಂ ಸಹ ಪೋಲಿಸರಿಂದ ಚಿತ್ರ ವಿಚಿತ್ರ ಕಿರುಕುಳಗಳಿಗೆ ಪಾತ್ರರಾದರು. ಭಾಷ್ಯಂ ಆಗಲೀ, ರಾಮಶರ್ಮರಾಗಲೀ ಕರೆಕೊಟ್ಟರೆ ಅಸಂಖ್ಯಾತ ಕಾರ್ಮಿಕರು (ರಾಷ್ಟ್ರೀಯ ಚಳವಳಿಯ) ಕೆಲಸಗಳಿಗೆ ಸಿದ್ಧ..........

ಅಂದು ಭಾಷ್ಯಂ, ರಾಮಶರ್ಮ ಹಾಕಿದ ಬುನಾದಿಯೇ ಕಾರ್ಮಿಕ ಪ್ರಪಂಚದ ಪ್ರಬುದ್ಧತೆಗೆ ಕಾರಣವಾಯಿತು. ಸ್ವಾತಂತ್ರ್ಯ ಚಳವಳಿಯಲ್ಲೂ ಸಹ ಕಾರ್ಮಿಕರು ತಮ್ಮ ಪಾಲಿನ ಸೇವೆಯನ್ನು ಉನ್ನತವಾದ ದೇಶಾಭಿಮಾನದಿಂದ, ನಿರ್ವಂಚನೆಯಿಂದ ಸೇವೆ ಸಲ್ಲಿಸಿದರಲ್ಲದೆ, ದೇಶಾಭಿಮಾನದ ಪರಿಣಾಮವಾಗಿ ಅನೇಕ ಕಾರ್ಮಿಕರು ಜೈಲುವಾಸವೇ ಮುಂತಾದ ಕಷ್ಟನಷ್ಟಗಳನ್ನು ಅನುಭವಿಸಿದರು. ಒಬ್ಬಿಬ್ಬರು ಸಂಸ್ಥಾನದಿಂದ ಗಡೀಪಾರು ಹೊಂದಿದರು. ವಿ.ವಿ.ಗಿರಿ ಅವರು ಪದೇಪದೇ ಸಂಸ್ಥಾನಕ್ಕೆ ಬಂದು ಕಾರ್ಮಿಕರನ್ನು ಸಂಘಟಿಸುತ್ತಿದ್ದರು.

ಅಧ್ಯಾಯ ೫

# ಮಿಲ್‌ನ ಇಂದಿನ ಸ್ಥಿತಿಗತಿ

೫.೧. ಜಾಗತೀಕರಣದ ಪ್ರಭಾವ

೫.೨. ಆಧುನಿಕ ಯಂತ್ರೋಪಕರಣಗಳಿಂದಾದ ಬದಲಾವಣೆ

೫.೩. ವಿದೇಶಿ ವಿನಿಮಯ ಹಾಗೂ ಭಾರತದ ಆರ್ಥಿಕತೆ

೫.೪. ಕೃಷಿಯಿಂದಾದ ಬದಲಾವಣೆ

ಕೆಲವು ಕೈಗಾರಿಕೆಗಳ ಸ್ಥಾನೀಕರಣವು, ವಿಶೇಷವಾಗಿ ಕಡಿಮೆ ಕೂಲಿಗೆ ದುಡಿಯುವ ಕಾರ್ಮಿಕರು ಮತ್ತು ಕಚ್ಚಾ ಪದಾರ್ಥಗಳ ಪೂರೈಕೆ ಅಥವಾ ಶಕ್ತಿ ಸಾಧನಗಳ ದೊರೆಯುವಿಕೆಯಿಂದ ನಿರ್ಧರಿಸಲ್ಪಡುವವು. ಕೆಲವು ಕಾರ್ಖಾನೆಗಳು ಬಂಡವಾಳವನ್ನಾಧರಿಸಿ ಕೇಂದ್ರೀಕೃತವಾಗಿರುತ್ತವೆ. ಮಾರುಕಟ್ಟೆಗೆ ಸಮೀಪದಲ್ಲಿ ಕೈಗಾರಿಕೆಯೊಂದನ್ನು ಸ್ಥಾಪಿಸಿದರೆ, ಸಾಗಾಣಿಕೆಯ ವೆಚ್ಚ ಮಿತಿಮೀರಿ ವಸ್ತುಗಳ ಉತ್ಪಾದನಾ ವೆಚ್ಚವು ಏರುವುದು.[೧] ಪರಿಣಾಮವಾಗಿ ಸಂಬಂಧಪಟ್ಟ ಕೈಗಾರಿಕಾ ಸಿದ್ಧವಸ್ತುಗಳ ಬೆಲೆಯು ತುಟ್ಟಿಯಾಗುವುದು. ಇದರಿಂದ ಕೆಲವೊಮ್ಮೆ ಅಂತಹ ಕಾರ್ಖಾನೆಗಳ ಸ್ಥಾನೀಕರಣವು ಬದಲಾಗುವ ಸಾಧ್ಯತೆಯಿರುತ್ತದೆ. ಬಿನ್ನಿಮಿಲ್ ಕಾರ್ಖಾನೆಯೂ ಸಹ ಇಂತದೇ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಿತು. ಮಾರುಕಟ್ಟೆ ಮತ್ತು ಕಾರ್ಖಾನೆ ಎರಡೂ ಸಹ ನಗರದಲ್ಲಿಯೇ ಸ್ಥಾಪಿತವಾಗಿದ್ದು ಇದಕ್ಕೆ ಪೂರೈಸಬೇಕಾದ ಕಚ್ಚಾ ಪದಾರ್ಥಗಳನ್ನು ದೂರದಿಂದ ಸಾಗಿಸಬೇಕಾಗಿತ್ತು. ಏಕೆಂದರೆ ಆ ವೇಳೆಗಾಗಲೇ ಬೆಂಗಳೂರಿನ ಸುತ್ತಮುತ್ತಲ ಜಮೀನುಗಳು ನಗರಗಳಾಗಿ ಪರಿವರ್ತನೆಯಾಗುತ್ತಿದ್ದವು. ಹೀಗಾಗಿ ಇದರ ಸಿದ್ಧ ಉಡುಪುಗಳ ಬೆಲೆಯು ತುಟ್ಟಿಯಾಯಿತು. ಈ ಸಲುವಾಗಿ ಮದ್ರಾಸಿನ ಬಿನ್ನಿ ಕಂಪನಿಯು ೧೯೯೮ರಲ್ಲಿ ಬಿನ್ನಿಮಿಲ್ ಅನ್ನು ಬೆಂಗಳೂರಿನಿಂದ ಚೆನ್ನೈಗೆ ಸ್ಥಳಾಂತರಿಸಿಕೊಂಡಿತು.

ಕಾರ್ಖಾನೆಯ ಸ್ಥಾನೀಕರಣವನ್ನು ನಿರ್ಧರಿಸುವ ಪ್ರಮುಖ ಅಂಶಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

೧. ಭೌಗೋಳಿಕಾಂಶಗಳು

ಅ. ಕಚ್ಚಾ ಪದಾರ್ಥಗಳು

ಆ. ಹವಾಮಾನ

ಇ. ನೀರು ಮತ್ತು ನಿವೇಶನ

೨. ಆರ್ಥಿಕಾಂಶಗಳು

ಅ. ಕಾರ್ಮಿಕರುಗಳು

ಆ. ಸಾರಿಗೆ ಸೌಲಭ್ಯ

ಇ. ಮಾರುಕಟ್ಟೆ

ಈ. ಬಂಡವಾಳ

೩. ರಾಜಕೀಯ ಅಂಶಗಳು

೪. ಐತಿಹಾಸಿಕ ಅಂಶಗಳು – ಉದಾಹರಣೆಗೆ ೧೬ ಮತ್ತು ೧೭ನೇ ಶತಮಾನದಲ್ಲಿ ಫ್ಲೆಮಿಷ್ ಮತ್ತು ಫ್ರೆಂಚ್ ಕುಶಲ ಕರ್ಮಿಗಳು ಇಂಗ್ಲೆಂಡಿಗೆ ವಲಸೆ ಬಂದುದರಿಂದ ಇಲ್ಲಿ ಜವಳಿ ಉದ್ಯಮಗಳು ಪ್ರಾರಂಭವಾಗುವುದಕ್ಕೆ ನೆರವಾಯಿತು. ಇದೇ ರೀತಿ ಅಮೆರಿಕ ಸಂಯುಕ್ತ ಸಂಸ್ಥಾನ, ನ್ಯೂ ಇಂಗ್ಲೆಂಡ್ ಪ್ರಾಂತ್ಯದ ಹತ್ತಿಬಟ್ಟೆ ಕೈಗಾರಿಕೆ.

೫. ಇತರೆ ಅಂಶಗಳು

ಅ. ತಾಂತ್ರಿಕತೆ ಮತ್ತು ವ್ಯವಸ್ಥಾಕತ್ವ

ಆ. ಅನುವಂಶೀಯ ಪರಿಣತಿ

ಇ. ಕೈಗಾರಿಕೆ ನಿಶ್ಚಲತೆ, ಇತ್ಯಾದಿ.

ಬಿನ್ನಿಮಿಲ್ ಬೆಂಗಳೂರಿನಲ್ಲಿ ನಾಶ ಹೊಂದಲು ಈ ಅಂಶಗಳಲ್ಲಿ ಕೆಲವೊಂದತೂ ಕಾರಣವಾಗಿರುವುದು ಸತ್ಯ.

ಜಾಗತೀಕರಣದ ಪ್ರಕ್ರಿಯೆಯಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಉಂಟಾಗುತ್ತಿರುವ ತೀವ್ರ ಬದಲಾವಣೆಗಳು ಕಾರ್ಮಿಕನೆಯ ಮೇಲೆ ಪ್ರಭಾವವನ್ನು ಬೀರಿದೆ. ಬಂಡವಾಳ ಹೂಡಿಕೆ, ಉತ್ಪಾದನೆ, ಬಳಕೆ, ಅನುಭೋಗ, ಉಪಭೋಗ, ಶೇಖರಣೆ, ಪ್ರಾಪಂಚೀಕರಣ ಪ್ರಕ್ರಿಯೆಯ ಪ್ರಭಾವಕ್ಕೊಳಗಾಗಿರುವ ಇವೆಲ್ಲವೂ ಚಲನೆಯ ಸ್ವಾತಂತ್ರ್ಯವನ್ನು ಪಡೆದಿವೆ. ಆದರೆ ಕಾರ್ಮಿಕನೆಯ ಚಲನೆ ಮಾತ್ರ ಅತ್ಯಂತ ತೀವ್ರ ನಿಯಂತ್ರಣಕ್ಕೊಳಪಟ್ಟಿದೆ. ಉತ್ತಮ ಆದಾಯ ಮತ್ತು ಉತ್ತಮ ವಾತಾವರಣವನ್ನು ಅರಸಿ ಕಠಿಣ ನಿಬಂಧನೆಗಳಿಗೆ, ಬಿಗುವಾದ ಮೇಲ್ವಿಚಾರಣೆಗೆ ಒಳಪಡಿಸಲಾಗಿದೆ. ಅಲ್ಲದೆ ಅಮೆರಿಕದ ಆರ್ಥಿಕತೆಯಲ್ಲಿ ತಲೆದೋರಿರುವ ಹಿಂಜರಿತವಲ್ಲದಿದ್ದರೂ ತೀವ್ರ ಮಂದಗತಿಯಿಂದ ಕೈಗಾರಿಕೆಯಲ್ಲಿ ಒಂದೆರಡು ವರ್ಷಗಳ ಹಿಂದೆ ಹೂಡುತ್ತಿದ್ದ ಅಗಾಧ ಬಂಡವಾಳ ತೀವ್ರ ಸಂಕುಚಿತವಾದ ಹಿನ್ನೆಲೆಯಲ್ಲಿ ಕೈಗಾರಿಕೆಯಲ್ಲೂ ಸಹ ಉದ್ಯೋಗ ಕಡಿತ ಇಂದಿನ ಕಠೋರ ಸತ್ಯವಾಗಿದೆ.[೨] ಈ ಸ್ಥಿತಿ ಪ್ರಾಪಂಚೀಕರಣದ ತರ್ಕದಲ್ಲೇ ಅಡಗಿದೆ. ಈ ಪ್ರಕ್ರಿಯೆ ಉತ್ಪಾದನಾ ವ್ಯವಸ್ಥೆಯಲ್ಲೇ ತೀವ್ರ ಬದಲಾವಣೆ ಉಂಟುಮಾಡಿದೆ.

### ಮಿಲ್‌ನ ಇಂದಿನ ದುಸ್ಥಿತಿಗೆ ಕಾರಣಗಳು

ಬೆಂಗಳೂರು ನಗರದ ಮಧ್ಯಭಾಗದಲ್ಲಿ ಚಾಲ್ತಿಯಲ್ಲಿದ್ದ ಬಿನ್ನಿಮಿಲ್ ಹಲವಾರು ತೊಂದರೆಗಳಿಗೆ ಬಲಿಯಾಗಿ ಮುಚ್ಚಲ್ಪಟ್ಟಿತು. ಇದಕ್ಕೆ ಕಾರಣವಾದ ಪ್ರಮುಖ ಅಂಶಗಳೆಂದರೆ:

### ೧. ಕಚ್ಚಾ ಸಾಮಾಗ್ರಿಗಳ ಕೊರತೆ

ಹತ್ತಿಗಿರಣಿಗಳ ಭವಿಷ್ಯ ಅದಕ್ಕೆ ದೊರೆಯುವ ಕಚ್ಚಾ ಸಾಮಾಗ್ರಿಗಳ ಮೇಲೆ ಅವಲಂಬಿತವಾಗಿವೆ. ಕಚ್ಚಾ ಹತ್ತಿಯು ಬೇಕಾದ ಸಮಯದಲ್ಲಿ ಸಿಗುತ್ತಿರಲಿಲ್ಲ. ಕಳಪೆ ಗುಣಮಟ್ಟದ ಕಚ್ಚಾವಸ್ತುಗಳು ದೊರೆಯುತ್ತಿದ್ದವು. ಇದರಿಂದ ಉತ್ತಮ ಮಟ್ಟದ ವಸ್ತುಗಳನ್ನು ತಯಾರಿಸಲು ಸಾಧ್ಯವಾಗಲಿಲ್ಲ. ಉತ್ತಮ ಮಟ್ಟದ ಕಚ್ಚಾ ಸಾಮಾಗ್ರಿಗಳು ದೊರೆಯದ ಕಾರಣ ಮಿಲ್ ಮುಚ್ಚಲ್ಪಟ್ಟಿತು.

### ೨. ಆಧುನೀಕರಣದ ಸಮಸ್ಯೆ

ಮಿಲ್‌ನಲ್ಲಿ ಬಳಸುತ್ತಿದ್ದ ಯಂತ್ರಗಳು ಬಹಳ ಹಳೆಯ ಮತ್ತು ಪ್ರಾಚೀನವಾದವುಗಳಾಗಿದ್ದವು. ಇದರಿಂದಾಗಿ ಅವುಗಳಿಂದ ಹೆಚ್ಚು ಹೆಚ್ಚು ವಸ್ತುಗಳನ್ನು ತಯಾರು ಮಾಡಲು ಸಾಧ್ಯವಾಗುತ್ತಿರಲಿಲ್ಲ. ತಯಾರಾದ ವಸ್ತುಗಳಲ್ಲಿ ಯಾವುದೇ ರೀತಿಯ ನವೀನತೆಯಾಗಲಿ ಒಳ್ಳೆಯ ಗುಣಮಟ್ಟವಾಗಲಿ ಇರುತ್ತಿರಲಿಲ್ಲ. ಯಂತ್ರಗಳನ್ನು ದುರಸ್ತಿ ಮಾಡಿಸಲು ಉತ್ಪಾದನಾ ವೆಚ್ಚ ಜಾಸ್ತಿಯಾಗುತ್ತಿತ್ತು. ಇಷ್ಟೇ ಅಲ್ಲದೆ ಇಲ್ಲಿ ತಯಾರಾದ ವಸ್ತುಗಳಿಗೆ ರಾಷ್ಟ್ರೀಯ ಮಾರುಕಟ್ಟೆಯಲ್ಲಾಗಲಿ ಅಥವಾ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಾಗಲಿ ಯಾವ ಬೇಡಿಕೆಯೂ ಇರಲಿಲ್ಲ. ಪರಿಣಾಮ ಮಿಲ್ ಮುಚ್ಚಲು ಕಾರಣವಾಯಿತು.

### ೩. ಉತ್ಪಾದನಾ ವೆಚ್ಚದಲ್ಲಿ ಏರುತ್ತಿರುವ ಹೆಚ್ಚಳ

ಈ ಕಾರ್ಖಾನೆಯ ಉತ್ಪಾದನಾ ವೆಚ್ಚವು ಅಧಿಕಗೊಂಡಿದ್ದರಿಂದ ಇದು ಹಲವಾರು ತೊಂದರೆಗಳನ್ನೆದುರಿಸಬೇಕಾಯಿತು. ಅತೀ ಪ್ರಾಚೀನ ಮತ್ತು ಹಳೆಯ ಯಂತ್ರಗಳು, ಕಡಿಮೆ ದಕ್ಷತೆಯ ಕಾರ್ಮಿಕರು, ಕಚ್ಚಾವಸ್ತುಗಳ ಕೊರತೆ, ಮುಂತಾದವುಗಳಿಂದ ಇದರ ಉತ್ಪಾದನಾ ವೆಚ್ಚವು ಹೆಚ್ಚಾಗುತ್ತಿತ್ತು. ಇದು ಕೈಗಾರಿಕೆಯ ಯಶಸ್ಸಿಗೆ ಆಂತರಿಕವಾಗಿ ಮತ್ತು ಅಂತರಾಷ್ಟ್ರೀಯವಾಗಿ ಬಹಳ ಕೆಟ್ಟ ಪರಿಣಾಮ ಬೀರಿತು.

### ೪. ನೈಲಾನ್ ಬಟ್ಟೆಗಳಿಂದ ಪೈಪೋಟಿ

ಆಧುನೀಕರಣದ ಈ ಕಾಲದಲ್ಲಿ ಹತ್ತಿ ಬಟ್ಟೆಗಳ ಬೇಡಿಕೆ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗಿದೆ. ಇದರ ಬದಲಾಗಿ ಈಗ ನೈಲಾನ್, ಟೆರಿಕಾಟ್ ಮತ್ತು ಇತರ ನವಿರಾದ

ಬಟ್ಟೆಗಳಿಗೆ ಬೇಡಿಕೆ ಹೆಚ್ಚಾಗುತ್ತಿದ್ದು, ಜನರನ್ನು ಆಕರ್ಷಿಸುವಲ್ಲಿ ಈ ಬಟ್ಟೆಗಳು ಹತ್ತಿ ಬಟ್ಟೆಗಳ ಜೊತೆ ಪೈಪೋಟಿ ನಡೆಸುತ್ತಿದ್ದವು. ಇದರಿಂದಾಗಿ ಹತ್ತಿ ಬಟ್ಟೆಗಳ ಬೇಡಿಕೆ ಕಡಿಮೆಯಾಯಿತು. ಬೇಡಿಕೆಯಿಲ್ಲದಿದ್ದರೆ ಉತ್ಪಾದನೆ ಆಗುತ್ತಿರಲಿಲ್ಲ.

೫. ಕಾರ್ಮಿಕರು ಮತ್ತು ಮಾಲೀಕರ ನಡುವೆ ಅಸಹಕಾರ ಮನೋಭಾವ

ಕಾರ್ಮಿಕರು ಮತ್ತು ಮಾಲೀಕರ ನಡುವೆ ಅನ್ಯೋನ್ಯ ಸಂಬಂಧ ಇಲ್ಲದಿರುವುದು ಉತ್ಪಾದನೆಯ ಮೇಲೆ ಹೆಚ್ಚಿನ ಪ್ರಭಾವ ಬೀರುತ್ತಿತ್ತು. ಇವರಿಬ್ಬರ ನಡುವೆ ಸುಸಂಘಟಿತ ಮನೋಭಾವ ಇಲ್ಲದಿದ್ದರೆ ಅದು ಮುಷ್ಕರ, ಬೀಗ ಮುದ್ರೆ ಇತ್ಯಾದಿಗಳಿಗೆ ನಾಂದಿ ಹಾಡಿ ಉತ್ಪಾದನೆ ಇಳಿಮುಖವಾಗುತ್ತಿತ್ತು.

೬. ತೆರಿಗೆಯ ಹೆಚ್ಚಳ

ಈ ಉದ್ಯಮವು ಎದುರಿಸುತ್ತಿರುವ ಇನ್ನೊಂದು ಸಮಸ್ಯೆಯೆಂದರೆ ತೆರಿಗೆಯ ಭಾರ. ಸುಂಕದಲ್ಲಿನ ಹೆಚ್ಚಳವು ಉತ್ಪಾದನೆಯ ಮೇಲೆ ಪರಿಣಾಮ ಬೀರುವುದಲ್ಲದೆ ವಸ್ತುಗಳ ಬೆಲೆಯೂ ಹೆಚ್ಚಾಗುತ್ತಿತ್ತು.

೭. ಸರ್ಕಾರದ ನಿಯಂತ್ರಣ ನಿರ್ಬಂಧಗಳು

ಸರ್ಕಾರವು ಹತ್ತಿಬಟ್ಟೆ ಕೈಗಾರಿಕೆಗಳ ಮೇಲೆ ಅನೇಕ ನಿರ್ಬಂಧಗಳನ್ನು ಮತ್ತು ನಿಯಂತ್ರಣಗಳನ್ನು ಹೇರಿದೆ. ಈ ನಿರ್ಬಂಧಗಳು ಬಟ್ಟೆಯ ಉತ್ಪಾದನೆ, ಬೆಲೆ ನಿರ್ಧಾರ ಮತ್ತು ಗುಣಮಟ್ಟಗಳಿಗೆ ಸಂಬಂಧಿಸಿರುತ್ತದೆ.

೫.೧. ಜಾಗತೀಕರಣದ ಪ್ರಭಾವ

"ಪ್ರಪಂಚ ಪ್ರಚಂಡ ರಭಸದಲ್ಲಿ ಮುನ್ನಡೆಯುತ್ತಿದೆ. ಅದು ಅದರ ಅಂತ್ಯದ ಸಾಮೀಪ್ಯಕ್ಕೆ ಧಾವಿಸುತ್ತಿದೆ."[1] ಎರಡನೆಯ ಸಹಸ್ರಮಾನದ ಪ್ರಾರಂಭದ ವರ್ಷಗಳಲ್ಲಿ (ಕ್ರಿ.ಶ. ೧೦೧೪) ಇಂಗ್ಲೆಂಡಿನ ಯಾರ್ಕ್ ಪಟ್ಟಣದ ಚರ್ಚ್ ಒಂದರಲ್ಲಿ ಆರ್ಚ್‌ಬಿಷಪ್ 'ಉಲ್‌ಫೂಸ್ತಾನ್' ಜ್ಞಾನೋಪದೇಶವನ್ನು ಬೋಧಿಸುವ ಪ್ರಸಂಗದಲ್ಲಿ ಆಡಿದ ಮಾತುಗಳು ಇವು. ಈ ಮಾತುಗಳು ಅಂದಿಗಿಂತಲೂ, ಹಿಂದೆಂದಿಗಿಂತಲೂ, ಮೂರನೆಯ ಸಹಸ್ರಮಾನದೊಡನೆ ಹೊಸ ಶತಮಾನವನ್ನು ಪ್ರವೇಶಿಸಿರುವ ಮನುಕುಲದ ಚರಿತ್ರೆಯ ಇಂದಿನ ಅಪೂರ್ವ ಸಂಕೀರ್ಣ ಸಂಕ್ರಮಣದ ಸಂದರ್ಭವನ್ನು ಸಾರವತ್ತಾಗಿ ಸೆರೆ ಹಿಡಿಯುತ್ತವೆ. ಈ ನೆಲೆಯಲ್ಲಿ ನಿಂತು ಮಾನವನ ಕಳೆದ ಐದು ಸಾವಿರ ವರ್ಷಗಳ ಇತಿಹಾಸದ ಸಿಂಹಾವಲೋಕನದಲ್ಲಿ ತೊಡಗಿದರೆ ಆ ಕಾಲಮಾನದಲ್ಲಿ ಮಾನವನ ನಾಗರಿಕತೆಯ ವಿಕಸನವನ್ನು ರೂಪಿಸಿರುವ ಕೆಲವು ನಿರ್ಣಾಯಕ ಕಾಲಘಟ್ಟಗಳನ್ನು

ಗುರುತಿಸಬಹುದು. ಅಂತಹ ಕಾಲಘಟ್ಟಗಳನ್ನು ೨೦ನೇ ಶತಮಾನದ ಉತ್ತರಾರ್ಧ, ಅದರ ಕೊನೆಯ ಕಾಲಘಟ್ಟವೆಂದು ಪರಿಗಣಿಸಬಹುದು. ಈ ಕಾಲಘಟ್ಟದ ಆಗುಹೋಗುಗಳನ್ನು ಅದರ ರಾಜಕೀಯ, ಸಾಂಸ್ಕೃತಿಕ, ವೈಜ್ಞಾನಿಕ, ನೈತಿಕ ಆಯಾಮಗಳನ್ನು ಯುಗಮೌಲ್ಯದ ನೆಲೆ ಸೆಲೆಗಳನ್ನು ಪ್ರತಿನಿಧಿಸುವ, ಪ್ರತಿಬಿಂಬಿಸುವ ರೂಪಕ ಒಂದಕ್ಕೆ ತಡಕಾಡಿದಾಗ ಹೊಳೆಯುವ ಶಬ್ದಗಳೆಂದರೆ 'ಜಾಗತೀಕರಣ ಪ್ರಕ್ರಿಯೆ'.

ಹಲವು ಅಭಿವೃದ್ಧಿ ಹೊಂದಿದ ದೇಶಗಳ ಸಮಾಜಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು ಅವರ ವ್ಯಾಖ್ಯಾನವನ್ನು ಹೀಗೆ ಮುಂದುವರೆಸಿದ್ದಾರೆ. "ದಾರ್ಶನಿಕರ, ಮಹಾನ್ ಕವಿಗಳ, ಮೇಧಾವಿಗಳ ಚಿಂತನೆಯ ಮೂಸೆಯಲ್ಲಿ ಪರಿಕಲ್ಪಿತವಾಗಿರುವ, ಮಾನವನ ನಾಗರಿಕತೆ ಸಂಸ್ಕೃತಿಗಳನ್ನು ಉದಾತ್ತೀಕರಿಸುವ ಒಂದೇ ಪ್ರಪಂಚ, ವಿಶ್ವಪ್ರಜೆ, ವಿಶ್ವಮಾನವ, ಈ ಭಾವನೆಗಳ ಸಾಕಾರದ ಸಾಮೀಪ್ಯಕ್ಕೆ ಕೊಂಡೊಯ್ಯುವ, ಮಾನವನ ಬೆಳವಣಿಗೆಯ ಪ್ರಬುದ್ಧ ಘಟ್ಟವನ್ನು ಸಂಕೇತಿಸುವ ಪ್ರಕ್ರಿಯೆಯೇ ಜಾಗತೀಕರಣ ಪ್ರಕ್ರಿಯೆ."[೪]

ಇದೇ ಧಾಟಿಯಲ್ಲಿ ತಮ್ಮ ಆಲೋಚನಾ ಪರಿಯನ್ನು ಮುಂದುವರಿಸುತ್ತಾ ಅವರು ಹೇಳುವುದೆಂದರೆ, ಪ್ರಾಚೀನ ಗ್ರೀಕರು ಆಲೋಚಿಸಿದ "ಒಕೂಮನ್" ಮತ್ತು ಪ್ರಾಚೀನ ಭಾರತೀಯ ತತ್ವಮೀಮಾಂಸೆ ಪರಿಕಲ್ಪಿಸಿದ "ವಸುದೈವ ಕುಟುಂಬಕಂ", ಇಂದಿನ ಜಾಗತೀಕರಣ ತತ್ವಕ್ಕೆ ತಳಹದಿ ಎಂದು ಕೆಲವು ಬರಹಗಾರರು ಹೇಳುತ್ತಾರೆ. ಈ ಚಿಂತನೆಯ ಧಾಟಿಯನ್ನು ಅನುಮೋದಿಸುವ ಕೆಲವು ಭಾರತೀಯ ಬುದ್ಧಿಜೀವಿಗಳು ರಾಷ್ಟ್ರಕವಿ ರವೀಂದ್ರರ ಮಹಾಕಾಲ್ಪನೆ, "ಅಂಜಿಕೆಯಿಲ್ಲದ ಮನಸ್ಸು, ಬಾಗದಿರದ ಶಿರ, ಮುಕ್ತವಾದ ತಿಳಿವು, ಕ್ಷುದ್ರ ಗ್ರಹ ಬಿತ್ತಿಗಳ ಧ್ವಂಸ, ನಿಜದ ಅಂತರಾಳದಿಂದ ಹೊಮ್ಮಿ ಸೂಸುವ ಧ್ವನಿಪೂರ್ಣತೆಯತ್ತ ಕರ್ಮದ ಹರಿವು, ತಿಳಿ ವಿಚಾರ, ಚಿರ ವಿಕಾಸದ ಬುದ್ಧಿ ಇವುಗಳಿಂದ ಕೂಡಿದ ಮಾನವರ ವಿಶ್ವದ ಉದಯ".[೫]

'ಹಾರ್ವರ್ಡ್ ಬಿಸಿನೆಸ್ ರಿವ್ಯೂ' ಎಂಬ ನಿಯತಕಾಲಿಕದ ೧೯೮೩ರ ಮೇ ತಿಂಗಳ ಸಂಚಿಕೆಯಲ್ಲಿ ಅರ್ಥಶಾಸ್ತ್ರಜ್ಞ 'ಥಿಯೊಡಾರ್ ಲಿವಿಟ್' ಬರೆದ ಲೇಖನ ಒಂದರಲ್ಲಿ 'ಮಾರುಕಟ್ಟೆಗಳ ಜಾಗತೀಕರಣ'[೬] ಎನ್ನುವ ಪದಗುಚ್ಚವನ್ನು ಮೊಟ್ಟಮೊದಲ ಬಾರಿಗೆ ಬಳಸಿದಂದಿನಿಂದ ಹೊರಬಂದಿರುವ ವಿಪುಲ ಅರ್ಥಶಾಸ್ತ್ರೀಯ ಮತ್ತು ಸಮಾಜಶಾಸ್ತ್ರೀಯ ಬರವಣಿಗೆಗಳ ಪ್ರಧಾನ ಭಾಗವನ್ನು ಆವರಿಸಿಕೊಂಡಿರುವ ಪದಗಳೆಂದರೆ ಜಾಗತೀಕರಣ ಪ್ರಕ್ರಿಯೆ, ಜಾಗತೀಯತೆ ಉದಾರೀಕರಣ, ಹೊಸ ಆರ್ಥಿಕ ಜಾಗತಿಕ ವ್ಯವಸ್ಥೆ. ಹಾಂಕಿ ಹುಗ್ವೆಂಟ್ ಹೇಳುವಂತೆ "ಜಾಗತಿಕ ಅರ್ಥವ್ಯವಸ್ಥೆಯ ಪ್ರಸ್ತುತ ಮಜಲಿನ ಚರ್ಚೆಗಳಲ್ಲಿ ಜಾಗತೀಕರಣ ಪ್ರಕ್ರಿಯೆಯ ಮೇಲಿನ ಚರ್ಚೆ ಹೃದಯ ಸ್ಥಾನವನ್ನು ಆಕ್ರಮಿಸಿಕೊಂಡಿದೆ."

ಕೈಗಾರಿಕೆ, ಕೃಷಿ ಮತ್ತು ಸೇವಾ ವಲಯಗಳಲ್ಲಿ ಹೊರಹೊಮ್ಮುತ್ತಿರುವ ಉತ್ಪಾದನೆಯ ಮಾದರಿ, ಜಾಗತಿಕ ವಿನಿಮಯ ವ್ಯವಸ್ಥೆ ಮತ್ತು ಜಾಗತಿಕ ಮಾರುಕಟ್ಟೆ-ಈ ಅಂಶಗಳ ಸುತ್ತಮುತ್ತ ಬೆಳೆದಿರುವ, ಬಂಡವಾಳಶಾಹಿ ಸಿದ್ಧಾಂತವನ್ನಾಧರಿಸಿದ ಹೊಸ ಅರ್ಥಿಕ ಉದಾರ ನೀತಿಯ ತಳಹದಿಯ ಮೇಲೆ ರೂಪಿತಗೊಂಡಿರುವ, ಸುಭದ್ರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಏಕೈಕ ಮಾರ್ಗವೆಂಬ ಪ್ರಚಾರಕ್ಕೆ ಘನವಸ್ತುವಾಗಿರುವ, ತೋರಿಕೆಗೆ ನಿರ್ಬಂಧಕ, ನಿರಪಾಯ ಎಂದು ಕಾಣುವ, ಆರ್ಥಿಕ ಪುನರ್ ವಿನ್ಯಾಸವೆಂಬ ಪ್ರತಿನಾಮವನ್ನು ಹೊಂದಿರುವ ಜಾಗತೀಕರಣ ಪ್ರಕ್ರಿಯೆ ಶ್ರೀಮಂತ ರಾಷ್ಟ್ರಗಳ, ವಿಶೇಷವಾಗಿ ಅಮೆರಿಕದ ನೇತೃತ್ವದಲ್ಲಿ ಭರದಿಂದ ಮುನ್ನಡೆಯುತ್ತ ಪ್ರಪಂಚವನ್ನು ಆವರಿಸಿಕೊಳ್ಳುತ್ತಿದೆ.

೧೯೯೦ರ ದಶಕದ ಮಧ್ಯಭಾಗದಲ್ಲಿ ಆರ್ಥಿಕ ಅಸ್ಥಿರತೆ ಮತ್ತು ಆರ್ಥಿಕ ಅವಗಡಗಳ ಪರಂಪರೆ ಪ್ರಾರಂಭವಾಯಿತು.[೬] ದಕ್ಷಿಣ ಅಮೆರಿಕದ ಬಹುದೊಡ್ಡ ಆರ್ಥಿಕತೆಯಾದ ಮೆಕ್ಸಿಕೋದಲ್ಲಿ ೧೯೯೪-೯೫ರಲ್ಲಿ ರಾಷ್ಟ್ರದ ಕರೆನ್ಸಿ 'ಪೆಸೋ'ದ ಪತನ. ನಂತರ ೧೯೯೭ರ ಮಧ್ಯಭಾಗದಲ್ಲಿ ಥಾಯ್ಲೆಂಡಿನ 'ಬಾತ್' ಕರೆನ್ಸಿಯ ಕುಸಿತ. ೧೯೯೮ರ ರಷ್ಯಾದ 'ರೂಬೆಲ್' ಪತನ, ಅದೇ ವರ್ಷದಲ್ಲಿ ಬ್ರೆಜಿಲ್‌ನ 'ರೀಲ್'ನ ಅಧೋಗತಿ – ಹೀಗೆ ಮುಂದುವರಿದು ಪ್ರಪಂಚದ ಹಣಕಾಸಿನ ವ್ಯವಸ್ಥೆಯಲ್ಲಿ ಅಸ್ತವ್ಯಸ್ತತೆ ಉಂಟಾಗಿ ಅಸ್ಥಿರತೆ ಮನೆ ಮಾಡಿತು. ಈ ಪೆಟ್ಟು ಭಾರತದ ಮೇಲೂ ಬಿದ್ದಿತು.

ಯಾವುದೇ ಸಮಾಜ ಅಥವಾ ದೇಶದ ನೆಮ್ಮದಿ ಆ ಸಮಾಜದ ಅಥವಾ ದೇಶದ ಅರ್ಥವ್ಯವಸ್ಥೆ ಮತ್ತು ಅಲ್ಲಿಂದ ಜನರ ಉದ್ಯೋಗ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಅನುಭೋಗಕ್ಕಾಗಿ ಉತ್ಪಾದನೆ, ಉತ್ಪಾದನೆಗಾಗಿ ಉದ್ಯೋಗ ಪರಸ್ಪರ ಮೇಳೈಸದಿದ್ದರೆ ಜನ ಬದುಕುವುದು ಸಾಧ್ಯವಿಲ್ಲ. ಒಂದು ಸಂಸ್ಕೃತಿಯ ಅಸ್ತಿತ್ವಕ್ಕೆ ಅಲ್ಲಿನ ಉತ್ಪಾದನಾ ವ್ಯವಸ್ಥೆಯೇ ಮೂಲ ಬೇರು. ಇಲ್ಲಿ ಆಗುವ ಬದಲಾವಣೆಗಳು ಉದ್ಭವಿಸುವ ಬೆಳವಣಿಗೆಗಳು ಬದುಕಿನ ಪ್ರತಿಯೊಂದು ಮಗ್ಗುಲನ್ನು ಪ್ರಭಾವಿಸುತ್ತವೆ. ಇದರಿಂದಾಗಿ ಆರ್ಥಿಕ ವಲಯ ಅಷ್ಟೊಂದು ಪ್ರಮುಖ ಕ್ಷೇತ್ರವಾಗಿದೆ. ಇವತ್ತಿನ ಜಾಗತೀಕರಣ ಕೂಡ ಅಂಥ ಬದಲಾವಣೆಯ ಒಂದಂಶ. ಯಾವುದೇ ಹೊಸ ಬದಲಾವಣೆಯಿಂದ ಸದ್ಯದ ಬದುಕು ಉನ್ನತ ಮಟ್ಟಕ್ಕೇರಬೇಕೆಂಬುದು ಪ್ರತಿಯೊಬ್ಬ ಕಾರ್ಮಿಕನ ಆಶಯ.[೭] ಆಗಾಗದಿದ್ದರೆ ಅವನು ಅದನ್ನು ಸಹಜವಾಗಿಯೇ ವಿರೋಧಿಸುತ್ತಾನೆ. ಇವತ್ತಿನ ಜಾಗತೀಕರಣ ಪ್ರಕ್ರಿಯೆ ಸದ್ಯದ ಬದುಕನ್ನು ಎತ್ತರಕ್ಕೇರಿಸುವುದಿರಲಿ, ನೌಕರನ ಬಹುಭಾಗದ ಬದುಕಿನ ಮಟ್ಟವನ್ನು ಕೆಳಗಿಳಿಸುವತ್ತ ಮುಂದುವರಿಯುತ್ತಿರುವಂತೆ ಕಂಡುಬರುತ್ತಿದೆ. ಇದರಿಂದಾಗಿಯೆ ಜಗತ್ತಿನ ಮೂಲೆ ಮೂಲೆಗಳಲ್ಲಿನ ಕಾರ್ಮಿಕರು ಈ ಹೊಸ ಗಾಳಿಯ ವಿರುದ್ಧ ಬಂಡೇಳುತ್ತಿದ್ದಾರೆ. ವಸಾಹತುಶಾಹಿ ಮೂಲದ ಈ ಪ್ರಕ್ರಿಯೆ ಒಂದು

ಅಲ್ಪಸಂಖ್ಯೆಯ ವರ್ಗಕ್ಕೆ ಮಾತ್ರ ಐಶಾರಾಮದ ಬದುಕನ್ನು ನೀಡುವತ್ತ ಸಾಗುತ್ತಿದೆ. ಪರಿಸ್ಥಿತಿಯ ದುರ್ಲಾಭ ಪಡೆದವರು ಮಾತ್ರ ಇದನ್ನು ಸಮರ್ಥಿಸುತ್ತಾರೆ.[೯] ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಕ್ಕೆ ಸಂಬಂಧಿಸಿದಂತೆ ಇಂಥ ಚಿಂತನಮಂಥನಗಳಾಗಲಿ, ಮಾದರಿ ಪ್ರಯೋಜನಗಳಾಗಲಿ ನಡೆಯದೆ ಕೇವಲ ಜಾಗತಿಕ ವ್ಯಾಪಾರ ಸಂಸ್ಥೆಯೊಡನೆ ಒಪ್ಪಂದದ ಕಾರಣದಿಂದಾಗಿ ಜಾರಿಗೊಂಡಿದ್ದರಿಂದ ಮತ್ತು ಜಾರಿಗೊಳ್ಳುತ್ತಿರುವುದರಿಂದ ಇವತ್ತಿನ ಅನಾಹುತಗಳು ಸೃಷ್ಟಿಯಾಗುತ್ತಿವೆ. ಇದರಿಂದಾಗಿ ಒಂದು ಕಸುಬನ್ನು ನಿರ್ವಹಿಸುತ್ತಿದ್ದ ವ್ಯಕ್ತಿ ಮತ್ತೊಂದು ಕಸುಬನ್ನು ಅನುಸರಿಸುವ ಜ್ಞಾನವಿಲ್ಲದೆ, ಇರುವ ಕಸುಬನ್ನು ಕಳೆದುಕೊಂಡು ಕೆಳದರ್ಜೆಯ ಕೌಶಲ್ಯದ ಕಸುಬುಗಳಿಗೆ ಪಲ್ಲಟವಾಗುತ್ತಿರುವುದು ಕಂಡುಬರುತ್ತಿದೆ. ಜಾಗತಿಕ ಮಾರುಕಟ್ಟೆಯ ಸ್ಪರ್ಧೆಯನ್ನು ಎದುರಿಸುವ, ಸಬಲೀಕರಣವನ್ನು ಆಂತರಿಕ ಉದ್ಯಮಿಗಳಿಗೆ, ಕಾರ್ಮಿಕರಿಗೆ ಕಲ್ಪಿಸುವ ಮೂಲ ಸೌಲಭ್ಯ ವ್ಯವಸ್ಥೆ ಇಲ್ಲಿದೆ. ಅವರಿಗೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಬೋಧನೆ ನೀಡಲಾಯಿತು. ಈಗಾಗಲೇ ಇಂತಹ ಸಬಲೀಕರಣವನ್ನು ಹೊಂದಿದ್ದ ವಿದೇಶಿ ಸಂಸ್ಥೆಗಳಿಗೆ ಆಂತರಿಕ ಮಾರುಕಟ್ಟೆಯನ್ನು ತೆರೆಯಲಾಯಿತು. ಆಮದು-ರಫ್ತು ನಿರ್ಬಂಧಗಳನ್ನು ಸಡಿಲಿಸಲಾಯಿತು. ಇದರ ಫಲವಾಗಿ ಇತ್ತ ಈ ದೇಶದೊಳಗಿನ ಕಾರ್ಮಿಕರಿಗೆ ಮತ್ತು ಉದ್ಯಮಿಗಳಿಗೆ ಆಂತರಿಕ ಶಕ್ತಿಯೂ ಇಲ್ಲವಾಗಿ, ಸರ್ಕಾರದ ನೆರವು ತಪ್ಪಿ, ರೆಕ್ಕೆ ಮುರಿದ ಹಕ್ಕಿಗಳಂತೆ ಉತ್ಪನ್ನ ಘಟಕಗಳು ಒಂದೊಂದೇ ಮುಚ್ಚತೊಡಗಿದವು.[೧೦] ಅಲ್ಲಿಂದ ಹೊರದೂಡಲ್ಪಟ್ಟ ನಿರುದ್ಯೋಗಿ ಕಾರ್ಮಿಕ ಸೈನ್ಯ ಕೈಗಾರಿಕೆಯಿಂದ ಕೃಷಿಗೆ ಕೃಷಿಯಿಂದ ಸಣ್ಣಪುಟ್ಟ ಕಸುಬುಗಳಿಗೆ ಹಂಚಿಹೋಗಿವೆ. ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಹ ತಮ್ಮ ಇಲಾಖೆಗಳಲ್ಲಿನ ಲಕ್ಷಾಂತರ ಉದ್ಯೋಗಗಳನ್ನು ರದ್ದುಪಡಿಸಿದವು. ಇದು ಜಾಗತೀಕರಣ, ಉದಾರೀಕರಣ ನೀತಿಯು ಸೃಷ್ಟಿಸುತ್ತಿರುವ ಅವಾಂತರ, ಸಾಮಾಜಿಕ ಅನ್ಯಾಯ.

೧೯೯೧ರ ಮಧ್ಯಭಾಗದಲ್ಲಿ ದೇಶದ ಆಡಳಿತ ಸೂತ್ರವನ್ನು ಹಿಡಿದ ಕಾಂಗ್ರೆಸ್ ಪಕ್ಷ ಎರಡು ಸಂಕೀರ್ಣ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಒಂದು, ವ್ಯಾಪಾರಿ ವಿನಿಮಯದ ಚಾಲ್ತಿಖಾತೆಯಲ್ಲಿ ಸುಮಾರು ಹತ್ತು ಶತಕೋಟಿ ಡಾಲರ್‌ಗಳಷ್ಟು ಖೋತ ಮತ್ತೊಂದು ಶೇಕಡ ೧೩ರಷ್ಟು ಇದ್ದ ಹಣದುಬ್ಬರ. ಈ ಸಂದರ್ಭಕ್ಕಾಗಲೇ ಬಿನ್ನಿಮಿಲ್ ಕಾರ್ಖಾನೆಯ ಅವನತಿಗೆ ವೇದಿಕೆ ಸಜ್ಜಾಗಿತ್ತು. ಗಲ್ಫ್ ಯುದ್ಧದ ಪರಿಣಾಮವಾಗಿ ಪಶ್ಚಿಮ ಏಷ್ಯಾದ ಅನಿವಾಸಿ ಭಾರತೀಯರಿಂದ ಹರಿದು ಬರುತ್ತಿದ್ದ ಡಾಲರ್ ಹಣ ಬತ್ತಿ ಹೋಗಿತ್ತು. ಭಾರತ ತನ್ನ ಸಾಲಾರ್ಹತೆಯನ್ನು ಕಳೆದುಕೊಂಡಿತ್ತು.[೧೧] ಈ ಸಮಸ್ಯೆಗಳಿಂದ ಪಾರಾಗಲು ಭಾರತ ಸರ್ಕಾರ ಐಎಂಎಫ್‌ಗೆ ಮೊರೆಹೋಗಿ ಅದು ವಿಧಿಸಿದ ನಿಬಂಧನೆಗಳಿಗೆ ಸಮ್ಮತಿಸಿ ದೊಡ್ಡ ಮೊತ್ತದ ಸಾಲವನ್ನು ಪಡೆಯಿತು. ಐಎಂಎಫ್, ವರ್ಲ್ಡ್ ಬ್ಯಾಂಕ್ ಮತ್ತು ಅಮೆರಿಕನ್ ಟ್ರೆಜರಿ ರೂಪಿಸಿದ್ದ ವಾಷಿಂಗ್‌ಟನ್

ಕಾನ್‌ಸೆನ್ಸ್ ಆಕಾರದಲ್ಲೇ ಸೂತ್ರೀಕರಿಸಿದ್ದ ಸಮಗ್ರ ಆರ್ಥಿಕ ಸುಧಾರಣಾ ಯೋಜನೆಯೊಂದನ್ನು ಜಾರಿಗೊಳಿಸಲು ಒಪ್ಪುವ ಮೂಲಕ ಈ ಸಮಸ್ಯೆಗಳಿಗೆ ಸ್ಪಂದಿಸಿದ ಅಂದಿನ ಅಲ್ಪಮತ ಕಾಂಗ್ರೆಸ್ ಸರ್ಕಾರ, ೪೫ ವರ್ಷಗಳಿಂದ ಪೋಷಿಸಿದ್ದ ಸಾಮಾಜಿಕ ನ್ಯಾಯದೊಂದಿಗೆ ಪ್ರಗತಿ, ಸಾಮಾಜಿಕ ಜವಾಬ್ದಾರಿಗಳು, ಬದ್ಧತೆಗಳು, ಸವಮಾನಾವಕಾಶಗಳು ಮತ್ತು ಸ್ವಾವಲಂಬನೆ ಈ ಧ್ಯೇಯಗಳನ್ನೊಳಗೊಂಡಿದ್ದ ಆರ್ಥಿಕ ಸಿದ್ಧಾಂತ, ಅರೆ ನಿಯಂತ್ರಿತ ಅಥವಾ ಮಿಶ್ರ ಆರ್ಥಿಕ ವ್ಯವಸ್ಥೆ – ನೆಹರೂರವರ ಪರಿಕಲ್ಪನೆಯ ಸೋಷಿಯಲಿಸ್ಟಿಕ್ ಪ್ಯಾಟ್ರನ್ ಆಫ್ ಸೊಸೈಟಿ – ಇವುಗಳನ್ನು ಕೈಬಿಟ್ಟು ಉದಾರೀಕರಣ, ಖಾಸಗೀಕರಣ, ರೂಪಾಯಿ ಅಪಮೌಲೀಕರಣ, ಸ್ಪರ್ಧಾತ್ಮಕತೆ ಈ ಕರಣಗಳ ವ್ಯವಸ್ಥೆಯ ಸ್ಥಾಪನೆಗೆ ನಾಂದಿ ಹಾಡಿತು. ಪರಿಣಾಮವಾಗಿ ಬಿನ್ನಿಮಿಲ್, ಸರ್ಕಾರದ ಬೆಂಬಲವನ್ನು ಕಳೆದುಕೊಂಡು ಖಾಸಗಿ ಕಾರ್ಖಾನೆಗಳ ರಭಸಕ್ಕೆ ಸಿಲುಕಿ ನರಳುತ್ತಾ ತನ್ನ ಅಂತ್ಯವನ್ನು ಕಂಡಿತು.

### ೫.೨. ಆಧುನಿಕ ಯಂತ್ರೋಪಕರಣಗಳಿಂದಾದ ಬದಲಾವಣೆ

೧೮೮೪ ರ ವೇಳೆಗಾಗಲೇ ಉಗಿಯಂತ್ರವನ್ನು ಹೊಂದಿದ್ದ ಮೈಸೂರು ಸಂಸ್ಥಾನದ ಉಣ್ಣೆ, ಹತ್ತಿ ಮತ್ತು ರೇಷ್ಮೆ ಮಿಲ್ ಎಂಬುದಾಗಿ ಖ್ಯಾತಿಯನ್ನು ಹೊಂದಿದ್ದ ಬಿನ್ನಿಮಿಲ್, ೧೯೪೫ರ ವೇಳೆಗೆ ೭,೧೪೧ ಕಾರ್ಮಿಕರನ್ನು ಹೊಂದಿದ, ವಿದ್ಯುಚ್ಛಕ್ತಿಯಿಂದ ಕಾರ್ಯ ನಿರ್ವಹಿಸುವ ಮೈಸೂರು ಸಂಸ್ಥಾನದ ಬೆಂಗಳೂರು ಜಿಲ್ಲೆಯ ಅತಿದೊಡ್ಡ ಮಿಲ್ ಎಂಬುದಾಗಿ ಪ್ರಸಿದ್ಧಿಯನ್ನು ಪಡೆದಿತ್ತು. ೧೯೪೦ರ ದಶಕದಲ್ಲಿ ಉತ್ಪಾದನೆಯಲ್ಲಿ ಇದು ಅಭಿವೃದ್ಧಿಯ ಶಿಖರವನ್ನು ತಲುಪಿತ್ತು. ಇಂತಹ ಮಿಲ್ ಬರುಬರುತ್ತಾ ಅವನತಿಯ ಹಾದಿಯನ್ನು ಹಿಡಿಯಿತು. ಅದಕ್ಕೆ ಒಂದು ಪ್ರಮುಖ ಕಾರಣ ಅದು ಅಳವಡಿಸಿಕೊಂಡಿದ್ದ ಹಳೆಯ, ಸಾಂಪ್ರದಾಯಿಕ ಯಂತ್ರೋಪಕರಣಗಳು. ಇದರಿಂದ ಉತ್ಪಾದನೆಯ ಮಟ್ಟ ಕುಸಿಯಿತು. ಅಲ್ಲದೆ ಸ್ವಾತಂತ್ರ್ಯನಂತರ ಸರ್ಕಾರ ಹೊಸ ಹೊಸ ಆಧುನಿಕ ಯಂತ್ರೋಪಕರಣಗಳಿಂದ ಕೂಡಿದ ಕಾರ್ಖಾನೆಗಳ ಸ್ಥಾಪನೆಗೆ ಪ್ರೋತ್ಸಾಹವನ್ನು ನೀಡಿತು. ಅಂತಹ ಕೆಲವು ಪ್ರಮುಖ ಕಾರ್ಖಾನೆಗಳೆಂದರೆ – ೧೯೫೮ರಲ್ಲಿ ಸ್ಥಾಪನೆಯಾದ ಗೋಪಾಲಕೃಷ್ಣ ಟೆಕ್ಸ್‌ಟೈಲ್ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೬೦ರಲ್ಲಿ ಸ್ಥಾಪನೆಯಾದ ಶ್ರೀ ಕೃಷ್ಣ ಸ್ಪಿನ್ನಿಂಗ್ ಆ್ಯಂಡ್ ವೀವಿಂಗ್ ಮಿಲ್ಸ್ (ಪ್ರೈ) ಲಿಮಿಟೆಡ್, ೧೯೬೩ರಲ್ಲಿ ಸ್ಥಾಪನೆಯಾದ ಸುಭದ್ರ ಟೆಕ್ಸ್‌ಟೈಲ್ (ಪ್ರೈ.) ಲಿಮಿಟೆಡ್ ಹಾಗೂ ೧೯೮೩ರಲ್ಲಿ ಸ್ಥಾಪನೆಯಾದ ಪಂಚವರ್ಣ ಟೆಕ್ಸ್‌ಟೈಲ್ ಪ್ರೊಸೆಸಿಂಗ್ (ಪ್ರೈ) ಲಿಮಿಟೆಡ್. ಈ ಕಾರ್ಖಾನೆಗಳು ಆಧುನಿಕ ಯಂತ್ರೋಪಕರಣಗಳಿಂದ ಕೂಡಿದ್ದು, ಬಿನ್ನಿಮಿಲ್ ಇವುಗಳೊಂದಿಗೆ ತೀವ್ರ ಪೈಪೋಟಿಗೆ ಇಳಿಯಬೇಕಾಗಿ ಬಂದಿತು.

